# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – I | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೬೫ |
| Part – I | Bangalore, Tuesday, March 12, 2013 (Phalguna 21, Shaka Varsha 1934) | No. 565 |


## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿನ ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನವನ್ನು ಪುನರ್ ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: RD 39 WGA 1991, ದಿನಾಂಕ: 27–03–1992

2) ಸರ್ಕಾರದ ಆದೇಶ ಸಂಖ್ಯೆ: RD 72 WFW 2001, ದಿನಾಂಕ: 19–02–2001

3) ಸರ್ಕಾರದ ಆದೇಶ ಸಂಖ್ಯೆ: ಸಕಇ:343:ಡಬ್ಲ್ಯೂಎಫ್‌ಡಬ್ಲ್ಯೂ:2004, ದಿನಾಂಕ: 28–0–2005

4) ಸರ್ಕಾರದ ಆದೇಶ ಸಂಖ್ಯೆ: ಸಕಇ:59:ಡಬ್ಲ್ಯೂಎಫ್‌ಡಬ್ಲ್ಯೂ:2009, ದಿನಾಂಕ: 25–02–2009

5) ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಿಂದ ಸ್ವೀಕೃತವಾದ ಟಿಪ್ಪಣಿ ಸಂಖ್ಯೆ:ಸಿಎಂ/ಜೆಎಸ್/326/ನಾನಿ/2013, ದಿನಾಂಕ: 02–03–2013

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಮುಸ್ಲಿಂ ಮಹಿಳೆಯರ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ : (1) ರಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದ ಸಮಿತಿಯನ್ನು ಮೂರು ವರ್ಷದ ಅವಧಿಗೆ ರಚಿಸಿದ್ದು, ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ : 2, 3, ಮತ್ತು 4 ರಲ್ಲಿ ಸಮಿತಿಯನ್ನು ಆಗಿಂದಾಗ್ಗೆ ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ 4 ರ ಆದೇಶದಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದ ಸಮಿತಿಯನ್ನು ದಿನಾಂಕ: 25–02–2009 ರಂದು ರಚಿಸಿದ್ದು, ಸದರಿ ಸಮಿತಿಯು ಮೂರು ವರ್ಷಗಳ ಅವಧಿಯು ದಿನಾಂಕ: 24–02–2011 ರಂದು ಮುಕ್ತಾಯಗೊಂಡಿರುತ್ತದೆ. ಆದುದರಿಂದ, ಈ ಸಮಿತಿಯನ್ನು ಪುನರ್ ರಚಿಸುವುದು ಅತ್ಯವಶ್ಯಕವಾಗಿದೆ.

ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನಕ್ಕೆ 11 ಸದಸ್ಯರ ಸಮಿತಿಯನ್ನು ಪುನರ್ ರಚಿಸಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶಸಂಖ್ಯೆ : MWD 49 WFW 2013, ಬೆಂಗಳೂರು, ದಿನಾಂಕ: 12–03–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿ ಬರುವ "ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ" ಸಮಿತಿಯನ್ನು ಮೂರು ವರ್ಷಗಳ ಅವಧಿ ಅಥವಾ ಮುಂದಿನ ಆದೇಶದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡ 11 ಸದಸ್ಯರನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಆದೇಶ ಹೊರಡಿಸಿದೆ.

| | | |
|---|---|---|
| 1. | ಮಾನ್ಯ ಕೃಷಿ ಮಾರುಕಟ್ಟೆ, ಹಜ್ ಮತ್ತು ವಕ್ಫ್ ಸಚಿವರು, ಕರ್ನಾಟಕ ಸರ್ಕಾರ | –ಅಧ್ಯಕ್ಷರು |
| 2. | ಶ್ರೀಮತಿ ತಸ್‌ನೀಮ್ ಸುಲ್ತಾನ<br>ಸೂರೆಪಾಳ್ಯ, ಅಶ್ವಥ್ ನಗರ ಮುಖ್ಯರಸ್ತೆ, ಅಲಂ ಲೇಔಟ್, ಸರ್ಕಾರಿ ಉರ್ದು ಶಾಲೆಯ ಪಕ್ಕ,<br>ನಾಗವಾರ, ಎಸ್.ಆರ್.ನಗರ ಅಂಚೆ, ಬೆಂಗಳೂರು–77 | –ಸದಸ್ಯರು |
| 3. | ಶ್ರೀಮತಿ ಅನ್ವರ್‌ಭಾನು ಪಠಾಣ, ಎ.ಎಂ.ಪಠಾಣ್, ಫ್ಲಾಟ್ ನಂ.338 & 339,<br>1ನೇ ಅಡ್ಡರಸ್ತೆ, ಇಂಡಸ್ಟ್ರಿಯಲ್ ಏರಿಯಾ, ಆಟೋ ನಗರ, ಬೆಳಗಾಂ–590 010 | –ಸದಸ್ಯರು |
| 4. | ಶ್ರೀಮತಿ ಶಂಷಾದ್, ರೋಜಾ ಬ್ಯೂಟಿ ಪಾರ್ಲರ್, ಬಿಳೇಕುದ್ರಿ ಕಾಂಪ್ಲೆಕ್ಸ್, ಇಳಕಲ್ ಅಂಚೆ,<br>ಹುನಗುಂದ ತಾ, ಬಾಗಲಕೋಟೆ | –ಸದಸ್ಯರು |
| 5. | ಶ್ರೀಮತಿ ಸಹರಾ ಬಾನು, ವಿದ್ಯಾನಗರ, ವಿಶ್ವಾರಾಧ್ಯ ಗುಡಿ, 3ನೇ ಅಡ್ಡರಸ್ತೆ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ. | –ಸದಸ್ಯರು |
| 6. | ಶ್ರೀಮತಿ ಫಾತಿಮಾ ಫೀರ್ ಮೊಹಮ್ಮದ್, ಗಿರಗಾವಿ, ಕೊಲ್ಹಾರ ಗ್ರಾಮ, ಬಿಜಾಪುರ ಜಿಲ್ಲೆ. | –ಸದಸ್ಯರು |
| 7. | ಶ್ರೀಮತಿ ಜೈಸದ್ಬಿನ್ ಮುಬಾರಕ್, ಯಲ್ಲೂರು, ಕಾವನಕಟ್ಟಿ ಗ್ರಾಮ, ಬೆಳಗಾವಿ. | –ಸದಸ್ಯರು |
| 8. | ಶ್ರೀಮತಿ ನಾಜಮ ಉನ್ನಿಸ್ ಬಿನ್ ರಹಮತ್ ಖಾನ್, #56, ಮಂಜುನಾಥ ನಗರ,<br>ಕೊಳ್ಳೇಗಾಲ ಟೌನ್, ಕೆಂಪಣ್ಣಪಾಳ್ಯ ರಸ್ತೆ, ಸರ್ಕಾರಿ ಬಸ್ ಡಿಪೋ ಎದುರು,<br>ಚಾಮರಾಜನಗರ ಜಿಲ್ಲೆ. | –ಸದಸ್ಯರು |
| 9. | ಶ್ರೀಮತಿ ರಹಮತ್ ಬಿನ್ ಎಂ.ಕೆ.ಮಹಮದ್, ರಹಮತ್ ಕಾಂಪ್ಲೆಕ್ಸ್,<br>ಚೇತನ್ ನರ್ಸಿಂಗ್ ಹೋಂ ಎದುರು, ಮಲೇನಾಡುರು ರಸ್ತೆ, ಚಿಕ್ಕಮಗಳೂರು ಟೌನ್. | –ಸದಸ್ಯರು |

10. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಅಥವಾ ಅವರ ಪ್ರತಿನಿಧಿ. –ಸದಸ್ಯರು

11. ಸರ್ಕಾರದ ಉಪ ಕಾರ್ಯದರ್ಶಿ/ಸರ್ಕಾರದ ಅಧೀನ ಕಾರ್ಯದರ್ಶಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು –ಸದಸ್ಯ ಕಾರ್ಯದರ್ಶಿ

ಈ ಕೆಳಕಂಡ ಅಧಿಕಾರಿಗಳು ಸದರಿ ಸಮಿತಿಗೆ ಖಾಯಂ ಆಹ್ವಾನಿತರಾಗಿರುತ್ತಾರೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಅಥವಾ ಅವರ ಪ್ರತಿನಿಧಿ.
2. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – I | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೬೬ |
|---|---|---|
| **Part – I** | **Bangalore, Tuesday, March 12, 2013 (Phalguna 21, Shaka Varsha 1934)** | **No. 566** |


## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ
### ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿನ ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತನ್ನು ಪುನರ್ ರಚಿಸಿರುವ ಬಗ್ಗೆ ಆದೇಶ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: RD 06 WGA 91, ದಿನಾಂಕ: 27–03–1992
2) ಸರ್ಕಾರದ ಆದೇಶ ಸಂಖ್ಯೆ: RD 06 WGA 91, ದಿನಾಂಕ: 16–01–1992
3) ಸರ್ಕಾರದ ಆದೇಶ ಸಂಖ್ಯೆ: RD 05 WCM 96, ದಿನಾಂಕ: 24–09–1996
4) ಸರ್ಕಾರದ ಆದೇಶ ಸಂಖ್ಯೆ: RD 72 WCM 99, ದಿನಾಂಕ: 19–02–2001
5) ಸರ್ಕಾರದ ಆದೇಶ ಸಂಖ್ಯೆ: RD 72 WCM 99, ದಿನಾಂಕ: 18–06–2003
6) ಸರ್ಕಾರದ ಆದೇಶ ಸಂಖ್ಯೆ: RD 08 WCM 2004, ದಿನಾಂಕ: 28–09–2005
7) ಸರ್ಕಾರದ ಆದೇಶ ಸಂಖ್ಯೆ: MWD 17 WCM 2008, ದಿನಾಂಕ: 22–10–2008
8) ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಿಂದ ಸ್ವೀಕೃತವಾದ ಟಿಪ್ಪಣಿ ಸಂಖ್ಯೆ: ಸಿಎಂ/ ಜೆಎಸ್/ 325/ನಾನಿ/2013, ದಿನಾಂಕ: 02–03–2013

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವಕ್ಫ್ ಸಂಸ್ಥೆಗಳ ಮುತವಲ್ಲಿಗಳು/ಆಡಳಿತ ಮಂಡಳಿಗಳು ವಕ್ಫ್ ಸಂಸ್ಥೆಗಳ ಆಸ್ತಿಗಳನ್ನು ಅಭಿವೃದ್ಧಿ ಪಡಿಸಲು ಇಚ್ಛಿಸಿ, ಅರ್ಹ ಸಂಸ್ಥೆಗಳು ಆರ್ಥಿಕವಾಗಿ ಅಭಿವೃದ್ಧಿಗೊಳಿಸಲು ಮತ್ತು ಆರ್ಥಿಕ ಸ್ವಾವಲಂಬಿತವಾಗಲು ರಾಜ್ಯ ಸರ್ಕಾರವು ಕೇಂದ್ರದ ಸೆಂಟ್ರಲ್ ವಕ್ಫ್ ಕೌನ್ಸಿಲ್ ರೂಪುರೇಷೆಗಳ ಆಧಾರದಂತೆ ರಾಜ್ಯದಲ್ಲಿ 'ಕರ್ನಾಟಕ ರಾಜ್ಯ ವಕ್ಫ್ ಪರಿಷತ್' ನ್ನು ರಚಿಸಿರುತ್ತದೆ. ಈ ಆರ್ಥಿಕ ಸಹಾಯದ ಮಂಜೂರಾತಿಯು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 27.03.1992 ರಲ್ಲಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 16.01.1992 ರಲ್ಲಿ ಈ ಯೋಜನೆಗೆ ಸಹಾಯಧನ ಮಂಜೂರು ಮಾಡಲು ಮತ್ತು ಸಮಿತಿಯನ್ನು 3 ವರ್ಷಗಳ ಅವಧಿಗೆ ರಚಿಸಲು ಆದೇಶಿಸಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ: 24.09.1996 ರಲ್ಲಿ ಸರ್ಕಾರವು ಕರ್ನಾಟಕ ವಕ್ಫ್ ಪರಿಷತ್ತನ್ನು 11 ಸದಸ್ಯರೊಂದಿಗೆ ಮೂರು ವರ್ಷದ ಅವಧಿಗೆ ರಚಿಸಿದ್ದು, ತದನಂತರ ಮೇಲೆ ಓದಲಾದ ಆದೇಶ (4), (5), ಮತ್ತು (6) ರಲ್ಲಿ ಸಮಿತಿಯನ್ನು ಆಗಿಂದಾಗ್ಗೆ ರಚಿಸಿರುತ್ತದೆ.

ಮೇಲೆ (7) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ವಕ್ಫ್ ಪರಿಷತ್ತನ್ನು ದಿನಾಂಕ: 22.10.2008 ರಂದು ರಚಿಸಿದ್ದು, ಸದರಿ ಸಮಿತಿಯ 3 ವರ್ಷಗಳ ಅವಧಿಯು ದಿನಾಂಕ: 21.10.2011 ರಂದು ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಸಮಿತಿಯನ್ನು ಪುನರ್ ರಚಿಸುವುದು ಅತ್ಯವಶ್ಯಕವಾಗಿದೆ.

ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತಿಗೆ 11 ಸದಸ್ಯರ ಸಮಿತಿಯನ್ನು ಪುನರ್ ರಚಿಸಿ ಈ ಪರಿಷತ್ತಿನ ಆರ್ಥಿಕ ಧನವನ್ನು (Revolving Fund) ಕರ್ನಾಟಕ ವಕ್ಫ್ ಪರಿಷತ್ತಿನ ಆರ್ಥಿಕ ಧನವೆಂದು ಆಡಳಿತಾತ್ಮಕವಾಗಿ ನಿರ್ವಹಿಸಲು ಸಮಿತಿ ರಚಿಸಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: KSWC 30 WCM 2012, ಬೆಂಗಳೂರು, ದಿನಾಂಕ: 12-03-2013**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿ ಬರುವ "ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತನ್ನು" ಮೂರು ವರ್ಷಗಳ ಅವಧಿ ಅಥವಾ ಮುಂದಿನ ಆದೇಶದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡ 11 ಸದಸ್ಯರನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಮಾನ್ಯ ಕೃಷಿ ಮಾರುಕಟ್ಟೆ, ಹಜ್ ಮತ್ತು ವಕ್ಫ್ ಸಚಿವರು, ಕರ್ನಾಟಕ ಸರ್ಕಾರ | -ಅಧ್ಯಕ್ಷರು |
| 2. | ಶ್ರೀ ಪೀರಾ ಹುಸೇನ್, ಹೊಸಳ್ಳಿ, ವಕೀಲರು, ಕಿನ್ನಾಳ, ಕೊಪ್ಪಳ ತಾಲ್ಲೂಕು ಮತ್ತು ಜಿಲ್ಲೆ. | -ಸದಸ್ಯರು |
| 3. | ಶ್ರೀ. ಆಸೀಫ್ ಸೇಠ, #2/2, ಎ.ಆರ್.ಎಸ್. ಮ್ಯಾನಶನ್, ನ್ಯೂ ಮೈಕೋ ರಸ್ತೆ, ಸರ್ಕಾರಿ ಶಾಲೆ ಮುಂಭಾಗ, ಆಡುಗೋಡಿ, ಬೆಂಗಳೂರು-30 | -ಸದಸ್ಯರು |
| 4. | ಶ್ರೀ ಸತ್ತಾರ್ ಗೋಲ, ಎಸ್.ಎಂ.ಗೋಲ ಟ್ರಾನ್ಸ್‌ಪೋರ್ಟ್, ನೆಹರು ಗಂಜ್, ಗೋಲ ಚೌಕ್, ಗುಲ್ಬರ್ಗಾ-585 104. | -ಸದಸ್ಯರು |
| 5. | ಶ್ರೀ ಎಂ.ಟಿಪ್ಪುಸುಲ್ತಾನ್ ಬಿನ್ ಮುಸ್ತಾಫ್, ಇಂಡಿಯನ್ ಕಮ್ಯುನಿಕೇಷನ್, ಹಡದಿ ರಸ್ತೆ, ದಾವಣಗೆರೆ | -ಸದಸ್ಯರು |
| 6. | ಶ್ರೀ ಇಸ್ಮಾಯಿಲ್‌ಸಾಬ ನಬಿಸಾಬ್ ತಹಸೀಲ್ದಾರ್, ಆಜಾದ್ ನಗರ, ಕೊಲ್ಹಾರ್, ಬಸವನಬಾಗೇವಾಡಿ, ಬಿಜಾಪುರ ಜಿಲ್ಲೆ. | -ಸದಸ್ಯರು |
| 7. | ಶ್ರೀ ಭಾಷಸಾಬ ಅಲ್ಲಾ ಬಕ್ಷ ಚೌಧರಿ, ಕೊಲ್ಹಾರ ಗ್ರಾಮ, ಬಸವನಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆ. | -ಸದಸ್ಯರು |
| 8. | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಅಥವಾ ಅವರ ಪ್ರತಿನಿಧಿ | -ಸದಸ್ಯರು |
| 9. | ಪ್ರಧಾನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಅಥವಾ ಅವರ ಪ್ರತಿನಿಧಿ. | -ಸದಸ್ಯರು |
| 10. | ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು. | -ಸದಸ್ಯರು |
| 11. | ಸರ್ಕಾರದ ಉಪ ಕಾರ್ಯದರ್ಶಿ/ಸರ್ಕಾರದ ಅಧೀನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು | -ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ - IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೬೭ |
| Part - IV-A | Bangalore, Tuesday, March 12, 2013 (Phalguna 21, Shaka Varsha 1934) | No. 567 |


## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 06 SAMVYAVI 2013, Bangalore, Dated : 12.03.2013**

The following Order made by the Governor is hereby published for general information:-

**"ORDER - I**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Council.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 06 SAMVYAVI 2013, Bangalore, Dated : 12.03.2013**

The following Order made by the Governor is hereby published for general information:-

**"ORDER - II**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Assembly.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೬೮ |
| Part – IV-A | Bangalore, Tuesday, March 12, 2013 (Phalguna 21, Shaka Varsha 1934) | No. 568 |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 64 ಶಾಸನ 2012, ಬೆಂಗಳೂರು, ದಿನಾಂಕ: 12.03.2013**

ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) (ತಿದ್ದುಪಡಿ) ವಿಧೇಯಕ, 2013ಕ್ಕೆ 2013ರ ಮಾರ್ಚ್ ಮಾಹೆಯ ಏಳನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ:34 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ 34**

(2013ರ ಮಾರ್ಚ್ ಹನ್ನೆರಡನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) (ತಿದ್ದುಪಡಿ) ಅಧಿನಿಯಮ, 2013**

(2013ರ ಮಾರ್ಚ್ ಏಳನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1998ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1998ನ್ನು (1998ರ ಕರ್ನಾಟಕ ಅಧಿನಿಯಮ 32) ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **24ನೇ ಪ್ರಕರಣದ ತಿದ್ದುಪಡಿ.–** ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1998ರ (1998ರ ಕರ್ನಾಟಕ ಅಧಿನಿಯಮ 32) 24ನೇ ಪ್ರಕರಣದ (1)ನೇ ಉಪಪ್ರಕರಣದ (6)ನೇ ಬಾಬು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(6) ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯ ಆಯುಕ್ತರು. – ಸದಸ್ಯರು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೬೯ |
| **Part – IV-A** | **Bangalore, Tuesday, March 12, 2013 (Phalguna 21, Shaka Varsha 1934)** | **No. 569** |


## PARLIAMENTARY AFFAIRS AND LEGISLATION SECRETARIAT

### NOTIFICATION

**NO: SAMVYASHAE 77 SHASANA 2012, Bangalore, dated: 12.03.2013**

Ordered that the translation of the ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 19) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of the ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 19) in the English language is published in the Official Gazette under the authority of His Excellency the Governor of Karnataka under clause (3) of Article 348 of the Constitution of India.

## KARNATAKA ACT NO. 19 OF 2013

(First published in the Karnataka Gazette Extra-ordinary on the Fifteenth day of February, 2013)

## THE KARNATAKA DAILY WAGE EMPLOYEES WELFARE ACT, 2012

(Received the assent of the Governor on the Fourteenth day of February, 2013)

An Act to provide for welfare of daily wage employees working for more than ten years in various establishments in the State.

Whereas, it is expedient to provide for welfare of the daily wage employees working for more than ten years in various establishments and to give them minimum security of tenure, better wage and certain social security on termination from long public service and for the matters connected therewith or incidental thereto;

Be it enacted in the sixty third year of the Republic of India, as follows:-

**1. Short title and commencement.-** (1) This Act may be called the Karnataka Daily Wage Employees Welfare Act, 2012.

(2) It shall come into force at once.

**2. Definitions.-** In this Act, unless the context otherwise requires,-

(a) "The daily wage employee" means an employee engaged by the Government or local bodies on daily wage basis, who has worked and completed not less than 10 years of service as daily wage employee as on 10$^{th}$ April, 2006 and who is working as such on the date of commencement of this Act;

(b) "The Government" means the Government of Karnataka;

(c) "The Establishment" means an establishment in the Government or in any local bodies;

(d) "Local bodies" means various Local self Governments, Panchayats and Municipal bodies constituted by law by the Government and in corporations including statutory or non-statutory authorities or Boards and Government undertakings.

**3. Continuation of daily wage employees.-**(1) Subject to provisions of this Act, the daily wage employees in the establishments whose names are notified by the Government under this Act, shall be continued on daily wage basis till they complete the age of sixty years.

Provided that no daily wage employee shall be continued unless he possessed the qualification prescribed for the post on the date of his initial engagement on daily wage basis;

(2) The State Government shall within one year from the date of commencement of this Act shall notify the names of eligible daily wage employees of all establishments for the purpose of sub-section (1).

**4. Pay, leave and terminal benefits of daily wage employees continued in service.-**(1) Notwithstanding anything contained in the Karnataka State Civil Services Act, 1978 (Karnataka Act 14 of 1990),the Karnataka Civil Services Rules or any other rules governing the conditions of service of Government servants made or deemed to have been made under the said Act. The pay of a daily wage employee shall be the minimum of the time scale of pay of the post in which he is continued in service. He shall also be paid admissible Dearness Allowance and House Rent Allowance as may be determined by the Government, by order, from time to time. A daily wage employee shall be entitled for all General Holidays, Casual Leave of fifteen days and Earned Leave of thirty days per year. A daily wage employee may be given an increase in his pay at such interval of time as may be determined by the Government, by order.

(2) The daily wage employee shall be entitled for such terminal benefits or ex-gratia, on his discontinuance after attaining the age of Sixty years, as may be determined and notified by the Government from time to time.

**5. Conduct and discipline.-** The provisions of the Karnataka Civil Services (Conduct) Rules, 1966 shall mutatis mutandis be applicable to the daily wage employee and he shall be liable for such disciplinary action including removal after following such procedure as may be prescribed.

**6. Termination for misconduct.-** No order terminating the services of a daily wage employee who has been continued under the provisions of this Act, for any misconduct shall be passed by the competent authority without holding a summary enquiry after giving a reasonable opportunity of being heard to the employee.

**7. Appeal.-** (1) Any person aggrieved by the order of any officer or Authority may appeal to the,-

(i) Government in case of daily wage employee in the Government establishment; or

(ii) head of the establishment in case of daily wage employee in the establishment other than Government establishment.

(2) The Government or the head of the establishment as the case may be, after hearing the aggrieved make such orders as it deems fit which shall be final.

**8. Protection of action taken in good faith.-** No suit, prosecution or other legal proceedings shall lie against the officers of the Government or local bodies for anything done or omitted to be done in good faith under this Act.

**9. Civil court not to have jurisdiction.-** No Civil Court shall have jurisdiction to entertain any suit or proceeding in respect of any claim for absorption or continuation arising from the provisions of this Act.

**10. Power to remove difficulty.-** If any difficulty arises in giving effect to the provisions of this Act, the Government may, by general or special order make such provisions as it appears to be necessary or expedient to remove the difficulty.

**11. Power to make rules.-** (1) The Government may, by notification and after previous publication, make rules to regulate other conditions of service of daily wages and for the purposes of this Act.

(2) Every rule made under this Act, every notification or order under this Act shall be laid as soon as may be after it is made before each House of the State Legislature, while it is in session for a total period of thirty days, which may be comprised in one session or in two or more successive sessions, and if before the expiry of the session in which it is so laid or the session immediately following both Houses agree that the rule notification or order should not be made the rule, notification or order shall thereafter have effect only in such modified form or be of no effect, as the case may be, so, however, that any such modification or annulment shall be without prejudice to the validity of anything previously done under that rule or notification or order.

The above translation of ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ:19) be published in the Official Gazette under clause (3) of Article 348 of the Constitution of India.

**H.R.BHARDWAJ**
GOVERNOR OF KARNATAKA

By Order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs
and Legislation

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೭೦ |
| **Part – IV-A** | **Bangalore, Tuesday, March 12, 2013 (Phalguna 21, Shaka Varsha 1934)** | **No. 570** |



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 16 ಶಾಸನ 2013, ಬೆಂಗಳೂರು, ದಿನಾಂಕ: 12.03.2013**

ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2013ಕ್ಕೆ 2013ರ ಮಾರ್ಚ್ ತಿಂಗಳ ಐದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ:32 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ನೇ ಕರ್ನಾಟಕ ಅಧಿನಿಯಮ ಸಂಖ್ಯೆ: 32**

(2013ರ ಮಾರ್ಚ್ ಹನ್ನೆರಡನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2013

(2013ರ ಮಾರ್ಚ್ ಐದನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **10ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32)(ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 10ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ "29ನೇ ಪ್ರಕರಣ ಅಥವಾ 30ನೇ ಪ್ರಕರಣಕ್ಕೆ" ಎಂಬ ಪದಗಳಿಗೆ "29ನೇ ಪ್ರಕರಣಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

3. **38ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 38ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಹತ್ತು ದಿನಗಳೊಳಗಾಗಿ" ಎಂಬ ಪದಗಳಿಗೆ "ಮೂವತ್ತು ದಿನಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

4. **39ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಹತ್ತು ದಿನಗಳೊಳಗಾಗಿ" ಎಂಬ ಪದಗಳಿಗೆ "ಮೂವತ್ತು ದಿನಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಈ ಪ್ರಕರಣದ ಅಡಿಯಲ್ಲಿ ಮರು ನಿರ್ಧಾರಣೆಯನ್ನು ಮಾಡಿದ ತರುವಾಯ,–

(ಎ) ಯಾವುದೇ ಹೆಚ್ಚಿನ ಸಾಕ್ಷ್ಯವು ನಿಯಮಿಸಲಾದ ಪ್ರಾಧಿಕಾರದ ಗಮನಕ್ಕೆ ಬಂದಲ್ಲಿ, ಅಥವಾ

(ಬಿ) ನಿಯಮಿಸಲಾದ ಪ್ರಾಧಿಕಾರಕ್ಕೆ, ಯಾವುದೇ ತೆರಿಗೆ ಅವಧಿಯ ಸಂಬಂಧದಲ್ಲಿ ವ್ಯಾಪಾರಿಯ ವಹಿವಾಟಿನ ಸಂಪೂರ್ಣ ಅಥವಾ ಯಾವುದೇ ಭಾಗವು ತೆರಿಗೆಯ ಮರು ನಿರ್ಧಾರಣೆಯಿಂದ ತಪ್ಪಿ ಹೋಗಿದೆ ಎಂಬುದನ್ನು ನಂಬಲು ಕಾರಣವಿದ್ದರೆ; ಅಥವಾ

(ಸಿ) ತೆರಿಗೆಯು ಕಡಿಮೆಯಾಗಿ ಮರು ನಿರ್ಧಾರಣೆಯಾಗಿದ್ದಲ್ಲಿ; ಅಥವಾ

(ಡಿ) ಈ ಅಧಿನಿಯಮದ ಅಡಿಯಲ್ಲಿ ಯಾವ ದರದಲ್ಲಿ ತೆರಿಗೆಯನ್ನು ನಿರ್ಧರಿಸಬಹುದಾಗಿತ್ತೋ ಆ ದರಕ್ಕಿಂತ ಕಡಿಮೆ ದರದಲ್ಲಿ ಮರು ನಿರ್ಧರಿಸಿದ್ದರೆ; ಅಥವಾ

(ಇ) ಅದರ ಸಂಬಂಧದಲ್ಲಿ ಯಾವುವೇ ಕಡಿತಗಳು ಅಥವಾ ವಿನಾಯಿತಿಗಳಿಗೆ ತಪ್ಪಾಗಿ ಅವಕಾಶ ನೀಡಲಾಗಿದ್ದರೆ,

– ನಿಯಮಿಸಲಾದ ಪ್ರಾಧಿಕಾರವು, ವಹಿವಾಟಿನ ಅಂಥ ತಪ್ಪಿ ಹೋದ ಸಂಪೂರ್ಣ ಅಥವಾ ಅದರ ಭಾಗವು ಮರು ನಿರ್ಧಾರಣೆಯ ಕಾಲದಲ್ಲಿ ಸದರಿ ಪ್ರಾಧಿಕಾರದ ಮುಂದೆ ಈಗಾಗಲೇ ಬಂದಿತ್ತೆಂಬ ವಾಸ್ತವಾಂಶ ಏನೇ ಇದ್ದರೂ, ಅಂಥ ಮೊದಲಿನ ಮರು ನಿರ್ಧಾರಣೆಗೆ ಹೆಚ್ಚುವರಿಯಾಗಿ ಯಾವುದೇ ಮತ್ತಷ್ಟು ಮರು ನಿರ್ಧಾರಣೆ ಮಾಡಬಹುದು."

5. **47ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 47ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "30ನೇ ಪ್ರಕರಣಕ್ಕೆ ಒಳಪಟ್ಟು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

6. **62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದ (4)ನೇ ಉಪಪ್ರಕರಣದ (ಸಿ) ಖಂಡದಲ್ಲಿ,–

(i) (i) ನೇ ಉಪಖಂಡದಲ್ಲಿ,

(ಎ) "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ಇನ್ನುಳಿದ ಅರ್ಧದಷ್ಟು" ಎಂಬ ಪದಗಳಿಗೆ "ಇನ್ನುಳಿದ ಶೇಕಡಾ ಎಪ್ಪತ್ತರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ii) ನೇ ಉಪಖಂಡದಲ್ಲಿ,

(ಎ) "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ತೆರಿಗೆಯ ಇನ್ನುಳಿದ ಅರ್ಧದಷ್ಟನ್ನು ಅಥವಾ ಇತರ ಮೊಬಲಗನ್ನು" ಎಂಬ ಪದಗಳಿಗೆ "ತೆರಿಗೆಯ ಅಥವಾ ಇತರ ಮೊಬಲಗಿನ ಇನ್ನುಳಿದ ಶೇಕಡಾ ಎಪ್ಪತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

7. **63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ,–

(1) (4)ನೇ ಉಪಪ್ರಕರಣದಲ್ಲಿ "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) (7)ನೇ ಉಪಪ್ರಕರಣದಲ್ಲಿ,–

(ಎ) (ಎ) ಖಂಡದಲ್ಲಿ,

(i) "ಮೊಬಲಗಿನ ಅರ್ಧವನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) "ಇನ್ನುಳಿದ ಅರ್ಧ ಭಾಗದ ಸಂದಾಯಕ್ಕೆ" ಎಂಬ ಪದಗಳಿಗೆ "ಇನ್ನುಳಿದ ಶೇಕಡಾ ಎಪ್ಪತ್ತರಷ್ಟು ಸಂದಾಯಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಬಿ) ಖಂಡದಲ್ಲಿ "ಇತರ ಮೊಬಲಗಿನ ಅರ್ಧದ ವಸೂಲಿಯ" ಎಂಬ ಪದಗಳಿಗೆ "ಇತರ ಮೊಬಲಗಿನ ಶೇಕಡಾ ಎಪ್ಪತ್ತರಷ್ಟು ವಸೂಲಿಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

8. **63ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ಎ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ತೆರಿಗೆ ನಿರ್ಧರಣೆಯನ್ನು ರದ್ದುಗೊಳಿಸುವ ಅಥವಾ ಹೊಸದಾಗಿ ತೆರಿಗೆ ನಿರ್ಧರಣೆಯನ್ನು ನಿರ್ದೇಶಿಸುವ" ಎಂಬ ಪದಗಳಿಗೆ "ತೆರಿಗೆಯ ನಿರ್ಧರಣೆಯನ್ನು ರದ್ದುಗೊಳಿಸುವ ಮತ್ತು ಹೊಸದಾಗಿ ತೆರಿಗೆಯ ನಿರ್ಧರಣೆಯನ್ನು ನಿರ್ದೇಶಿಸುವ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

9. **74ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 74ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ಅಥವಾ ಸಿವಿಲ್ ಕಾಮಗಾರಿ ಕರಾರನ್ನು ಕೈಗೊಳ್ಳಲು ಮಾಡಿಕೊಂಡ ಒಪ್ಪಂದದ ಪ್ರತಿಯನ್ನು ಸಲ್ಲಿಸಲು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

10. **76ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 76ನೇ ಪ್ರಕರಣದ (1)ನೇ ಉಪಪ್ರಕರಣದ,–

(i) (ಎ) ಖಂಡದಲ್ಲಿ "ಅಥವಾ 30ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು; ಮತ್ತು

(ii) (ಬಿ) ಖಂಡದಲ್ಲಿ "ಅಥವಾ 30ನೇ ಪ್ರಕರಣದಲ್ಲಿ ಉಪಬಂಧಿಸಲಾದುದಕ್ಕೆ ಹೊರತಾಗಿ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

11. **ಒಂದನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ 5ನೇ ಕ್ರಮ ಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ, (ii) ನೇ ಬಾಬಿನಲ್ಲಿ "ಹಿಂಡಿ ಮತ್ತು ಭೂಸ" ಎಂಬ ಪದಗಳಿಗೆ "ಗೋಧಿ ಬೂಸ ಮತ್ತು ಸೋಯಾಬೀನ್‌ನ ಎಣ್ಣೆ ತೆಗೆದ ಹಿಂಡಿಯನ್ನು ಹೊರತುಪಡಿಸಿ ಎಣ್ಣೆ ತೆಗೆದ ಹಿಂಡಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೨, ೨೦೧೩ (ಫಾಲ್ಗುಣ ೨೧, ಶಕ ವರ್ಷ ೧೯೩೪) | ನಂ. ೫೭೧ |
|---|---|---|
| **Part – IV-A** | **Bangalore, Tuesday, March 12, 2013 (Phalguna 21, Shaka Varsha 1934)** | **No. 571** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 14 ಶಾಸನ 2013, ಬೆಂಗಳೂರು, ದಿನಾಂಕ: 12.03.2013**

ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ವಿಧೇಯಕ, 2013 ಕ್ಕೆ 2013ರ ಮಾರ್ಚ್ ಮಾಹೆಯ ಎಂಟನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 33 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ : 33**

(2013ರ ಮಾರ್ಚ್ ಹನ್ನೆರಡನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013

(2013ರ ಮಾರ್ಚ್ ಎಂಟನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯದಲ್ಲಿನ ಸಕ್ಕರೆ ಕಾರ್ಖಾನೆಗಳಲ್ಲಿ ಬಳಕೆಗೆ ಅಗತ್ಯವಾದ ಕಬ್ಬಿನ ಖರೀದಿ ಮತ್ತು ಸರಬರಾಜನ್ನು ನಿಯಂತ್ರಿಸಲು ಒಂದು ಅಧಿನಿಯಮ.

ಕರ್ನಾಟಕ ರಾಜ್ಯದಲ್ಲಿನ ಸಕ್ಕರೆ ಕಾರ್ಖಾನೆಗಳಲ್ಲಿ ಬಳಕೆಗೆ ಅಗತ್ಯವಾದ ಕಬ್ಬಿನ ಖರೀದಿ ಮತ್ತು ಸರಬರಾಜನ್ನು ನಿಯಂತ್ರಿಸಲು ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಆನುಷಂಗಿಕವಾದ ವಿಷಯಗಳಿಗಾಗಿ ಉಪಬಂಧಿಸುವುದು ವಿಹಿತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಮಂಡಲಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕಬ್ಬು ನಿಯಂತ್ರಣ ಮಂಡಲಿ;

(ಬಿ) "ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು" ಎಂದರೆ, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ರಾಜ್ಯ ಸರ್ಕಾರವು ನೇಮಕ ಮಾಡಿದ ಅಧಿಕಾರಿ;

(ಸಿ) "ಕಬ್ಬು ಅರೆಯುವ ಹಂಗಾಮು" ಎಂದರೆ, ರಾಜ್ಯ ಸರ್ಕಾರವು ಮಂಡಳಿಯ ಸಮಾಲೋಚನೆಯೊಂದಿಗೆ ಅಧಿಸೂಚನೆ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಸಾಮಾನ್ಯವಾಗಿ ಕಬ್ಬನ್ನು ಅರೆಯುವಂತಹ ಅವಧಿ;

(ಡಿ) "ಜಿಲ್ಲಾಧಿಕಾರಿ" ಎಂದರೆ, ಸಂಬಂಧಪಟ್ಟ ಕಂದಾಯ ಜಿಲ್ಲೆಯ ಜಿಲ್ಲಾಧಿಕಾರಿ;

(ಇ) "ಕಾರ್ಖಾನೆ" ಎಂದರೆ, ಸಕ್ಕರೆ ಉತ್ಪಾದನೆಗೆ ಸಂಬಂಧಿಸಿದ ಯಾವುದೇ ತಯಾರಿಕಾ ಪ್ರಕ್ರಿಯೆಯು ವಿದ್ಯುಚ್ಛಕ್ತಿಯ ಸಹಾಯದೊಂದಿಗೆ ನಡೆಯುತ್ತಿರುವ ಅಥವಾ ಸಾಮಾನ್ಯವಾಗಿ ನಡೆಸುತ್ತಿರುವ ಹಿಂದಿನ ಹನ್ನೆರಡು ತಿಂಗಳುಗಳ ಯಾವುದೇ ದಿನದಲ್ಲಿ ಮತ್ತು ಅದರ ಯಾವುದೇ ಭಾಗದಲ್ಲಿ ಇಪ್ಪತ್ತು ಅಥವಾ ಅದಕ್ಕಿಂತ ಹೆಚ್ಚು ಕೆಲಸಗಾರರು ಕಾರ್ಯನಿರ್ವಹಿಸುತ್ತಿರುವ ಅಥವಾ ಕಾರ್ಯನಿರ್ವಹಿಸಿರುವ, ಸಕ್ಕರೆ ಕಾರ್ಖಾನೆ;

(ಎಫ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಜಿ) "ಖಂಡಸಾರಿ ಸಕ್ಕರೆ ತಯಾರಿಕಾ ಘಟಕ" ಎಂದರೆ, ತೆರೆದ ಕೊಪ್ಪರಿಗೆಯ ಪ್ರಕ್ರಿಯೆ ಮೂಲಕ ಯಾವುದೇ ಯಾಂತ್ರಿಕ ಶಕ್ತಿಯಿಂದ ನಡೆಯುತ್ತಿರುವ, ಗಾಣದ ನೆರವಿನೊಂದಿಗೆ ಖಂಡಸಾರಿ ಸಕ್ಕರೆ ತಯಾರಿಕೆ ಅಥವಾ ಉತ್ಪಾದನೆಯಲ್ಲಿ ತೊಡಗಿದ ಅಥವಾ ಸಾಮಾನ್ಯವಾಗಿ ತೊಡಗಿದ ಒಂದು ಘಟಕ;

(ಎಚ್) "ಕಾರ್ಖಾನೆಯ ಅಧಿಭೋಗದಾರ" ಎಂದರೆ, ಕಾರ್ಖಾನೆಯ ಅಥವಾ ಖಂಡಸಾರಿ ಸಕ್ಕರೆ ತಯಾರಿಕಾ ಘಟಕದ ವ್ಯವಹಾರಗಳ ಮೇಲೆ ನಿಯಂತ್ರಣ ಹೊಂದಿರುವ ವ್ಯಕ್ತಿ ಹಾಗೂ ಸದರಿ ವ್ಯವಹಾರಗಳನ್ನು ವ್ಯವಸ್ಥಾಪನಾ ಏಜೆಂಟನಿಗೆ ವಹಿಸಿದ್ದಲ್ಲಿ, ಅಂತಹ ಏಜೆಂಟ್;

(ಐ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರೂಪಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಜೆ) "ಮೀಸಲು ಪ್ರದೇಶ" ಎಂದರೆ, ಕಬ್ಬು (ನಿಯಂತ್ರಣ) ಆದೇಶ, 1966ರ ಮೇರೆಗೆ ಅಧಿಸೂಚಿಸಲಾದ ಪ್ರದೇಶ;

(ಕೆ) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಎಲ್) "ಕಬ್ಬು" ಎಂದರೆ, ಸಕ್ಕರೆ ಕಾರ್ಖಾನೆಯಲ್ಲಿ ಅಥವಾ ಖಂಡಸಾರಿ ಸಕ್ಕರೆ ತಯಾರಿಕಾ ಘಟಕದಲ್ಲಿ ಬಳಸಲು ಉದ್ದೇಶಿಸಲಾದ ಕಬ್ಬು;

(ಎಂ) "ಕಬ್ಬು ಬೆಳೆಗಾರ" ಎಂದರೆ, ಸ್ವತ: ತಾನೆ ಆಗಲಿ ಅಥವಾ ತನ್ನ ಕುಟುಂಬದ ಸದಸ್ಯರ ಮೂಲಕವಾಗಲಿ ಅಥವಾ ಕೂಲಿ ಕಾರ್ಮಿಕರ ಮೂಲಕವಾಗಲಿ ಕಬ್ಬನ್ನು ಬೆಳೆಯುವ ಗೇಣಿದಾರನನ್ನು ಒಳಗೊಂಡಂತೆ ಒಬ್ಬ ವ್ಯಕ್ತಿ.

(ಎನ್) "ಸಕ್ಕರೆ ಹಂಗಾಮು" ಎಂದರೆ ಅಕ್ಟೋಬರ್ ತಿಂಗಳ ಮೊದಲನೇ ದಿನದಿಂದ ಪ್ರಾರಂಭವಾಗುವ ಮತ್ತು ಮುಂದಿನ ವರ್ಷದ ಸೆಪ್ಟೆಂಬರ್ ತಿಂಗಳ ಮೂವತ್ತನೇ ದಿನದಂದು ಕೊನೆಗೊಳ್ಳುವ ವರ್ಷ.

3. **ಕಬ್ಬು ನಿಯಂತ್ರಣ ಮಂಡಲಿ.–** (1) ರಾಜ್ಯ ಸರ್ಕಾರವು ಈ ಅಧಿನಿಯಮ ಪ್ರಾರಂಭವಾದ ನಂತರ ಸಾಧ್ಯವಾಗಬಹುದಾದಷ್ಟು ಬೇಗನೆ, ಈ ಅಧಿನಿಯಮದಲ್ಲಿ ವಹಿಸಲಾದಂಥ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಕಬ್ಬು ನಿಯಂತ್ರಣ ಮಂಡಲಿಯನ್ನು (ಇಲ್ಲಿ ಇನ್ನು ಮುಂದೆ ಮಂಡಲಿಯೆಂದು ಉಲ್ಲೇಖಿಸಲಾಗಿದೆ) ರಚಿಸತಕ್ಕದ್ದು.

(2) ಮಂಡಲಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | | |
|---|---|---|---|
| (ಎ) | ಸಕ್ಕರೆ ಖಾತೆ ಹೊಂದಿದ ಸಚಿವರು | – | ಅಧ್ಯಕ್ಷರು |
| (ಬಿ) | ಕೃಷಿ ಖಾತೆ ಹೊಂದಿದ ಸಚಿವರು | – | ಸಹ–ಅಧ್ಯಕ್ಷರು |
| (ಸಿ) | ಕಾರ್ಯದರ್ಶಿ II–, ಆರ್ಥಿಕ ಇಲಾಖೆ (ವೆಚ್ಚ) ಅಥವಾ ಉಪ ಕಾರ್ಯದರ್ಶಿಯವರ ದರ್ಜೆಗೆ ಕಡಿಮೆಯಿರದ ಅವರ ನಾಮನಿರ್ದೇಶಿತರು | – | ಸದಸ್ಯ |
| (ಡಿ) | ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – | ಸದಸ್ಯ |
| (ಇ) | ಕೃಷಿ ಆಯುಕ್ತರು | – | ಸದಸ್ಯ |
| (ಎಫ್) | ಕಬ್ಬು ಬೆಳೆಗಾರರಿಂದ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಐವರಿಗಿಂತ ಹೆಚ್ಚಿಲ್ಲದ ರೈತ ಪ್ರತಿನಿಧಿಗಳು | – | ಸದಸ್ಯರು |
| (ಜಿ) | ಸಕ್ಕರೆ ಕಾರ್ಖಾನೆಗಳನ್ನು ನಡೆಸುತ್ತಿರುವವರಿಂದ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಐವರಿಗಿಂತ ಹೆಚ್ಚಿಲ್ಲದ ಸದಸ್ಯರು | – | ಸದಸ್ಯರು |
| (ಎಚ್) | ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು | – | ಸದಸ್ಯ ಕಾರ್ಯದರ್ಶಿ |

(3) ಮಂಡಲಿಯ ಕೇಂದ್ರ ಕಾರ್ಯಸ್ಥಾನವು ಬೆಂಗಳೂರಿನಲ್ಲಿರತಕ್ಕದ್ದು.

(4) ಮಂಡಲಿಯ ಸಭೆಗಳ ನೋಟೀಸು, ಸಭೆಯ ಸ್ಥಳ, ಕೋರಂ ಹಾಗೂ ಮಂಡಲಿಯ ಕಾರ್ಯಕಲಾಪಗಳಿಗೆ ಸಂಬಂಧಿಸಿದ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(5) ರಾಜ್ಯ ಸರ್ಕಾರದ ಇಚ್ಛೆಗೆ ಅಥವಾ (7) ನೇ ಉಪಪ್ರಕರಣಕ್ಕೊಳಪಟ್ಟು, ಸರ್ಕಾರೇತರ ಸದಸ್ಯನು ನಾಮನಿರ್ದೇಶನಗೊಂಡ ದಿನಾಂಕದಿಂದ ಮೂರು ವರ್ಷಗಳ ಅವಧಿಯವರೆಗೆ ಸದಸ್ಯತ್ವವನ್ನು ಹೊಂದತಕ್ಕದ್ದು. ಮಂಡಲಿಗೆ ಒಮ್ಮೆ ನಾಮ ನಿರ್ದೇಶನಗೊಂಡ ಸದಸ್ಯನು, ಎರಡನೇ ಬಾರಿಗೆ ಮರು–ನಾಮನಿರ್ದೇಶಿತನಾಗಲು ಅರ್ಹನಾಗತಕ್ಕದ್ದಲ್ಲ.

(6) ಸರ್ಕಾರೇತರ ಸದಸ್ಯನು ತನ್ನ ಕೈ ಬರಹದಲ್ಲಿ ರಾಜ್ಯ ಸರ್ಕಾರವನ್ನು ಸಂಬೋಧಿಸಿ ತನ್ನ ಸ್ಥಾನಕ್ಕೆ ರಾಜೀನಾಮೆ ನೀಡಬಹುದು, ಆದರೆ ಆತನು ತನ್ನ ರಾಜೀನಾಮೆಯು ಅಂಗೀಕೃತವಾಗುವವರೆಗೆ ತನ್ನ ಸ್ಥಾನದಲ್ಲಿ ಮುಂದುವರಿಯತಕ್ಕದ್ದು.

(7) ಸರ್ಕಾರೇತರ ಸದಸ್ಯನು, ಈ ಕೆಳಗೆ ನಿರ್ದಿಷ್ಟಪಡಿಸಿರುವ ಯಾವುದೇ ಒಂದು ಅನರ್ಹತೆಗೆ ಗುರಿಯಾದರೆ, ಸರ್ಕಾರವು ಆತನನ್ನು ಸ್ಥಾನದಿಂದ ತೆಗೆದುಹಾಕಬಹುದು, ಎಂದರೆ :–

(ಎ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಬಿ) ಸರ್ಕಾರದ ಅಭಿಪ್ರಾಯದಲ್ಲಿ ಆತನು ನೈತಿಕ ಅಧ:ಪತನವನ್ನೊಳಗೊಂಡ ಅಪರಾಧಕ್ಕಾಗಿ ನಿರ್ಣೀತ ಅಪರಾಧಿಯಾಗಿದ್ದರೆ ಹಾಗೂ ಕಾರಾವಾಸ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಸಿ) ಅಸ್ವಸ್ಥ ಚಿತ್ತನಾಗಿದ್ದು ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿತನಾಗಿದ್ದರೆ ; ಅಥವಾ

(ಡಿ) ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾಗಿದ್ದರೆ.

(8) ಮಂಡಲಿಯು ಕಬ್ಬು ಅರೆಯುವ ಹಂಗಾಮು ಪ್ರಾರಂಭವಾಗುವ ಮುಂಚೆ, ಕಬ್ಬು ಅರೆಯುವ ಹಂಗಾಮು ಮುಕ್ತಾಯವಾದ ನಂತರ ಮತ್ತು ಸಕ್ಕರೆ ಹಂಗಾಮಿನ ಅಂತ್ಯದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು. ಮಂಡಲಿಯ ಸದಸ್ಯ–ಕಾರ್ಯದರ್ಶಿಯು ಮಂಡಲಿಯ ಅಧ್ಯಕ್ಷರ ನಿಯಂತ್ರಣಕ್ಕೆ ಒಳಪಟ್ಟು ಅವಶ್ಯವಾಗಬಹುದಾದಷ್ಟು ಸಲ ಸಭೆಗಳನ್ನು ಕರೆಯಬಹುದು ಮತ್ತು ಮೂರನೇ ಒಂದರಷ್ಟು ಸದಸ್ಯರು ಅಗತ್ಯ ಪಡಿಸಿದಾಗ ಸಭೆಯನ್ನು ಕರೆಯತಕ್ಕದ್ದು.

(9) ಮಂಡಲಿಗೆ ನಾಮನಿರ್ದೇಶನಗೊಂಡ ಸರ್ಕಾರೇತರ ಸದಸ್ಯನ ಸ್ಥಾನವು ರಾಜೀನಾಮೆ, ಮರಣ, ತೆಗೆದುಹಾಕುವಿಕೆ ಅಥವಾ ಇತರೆ ರೀತಿಯಲ್ಲಿ ಖಾಲಿಯಾದಾಗ, ಸರ್ಕಾರವು ಅಂತಹ ಖಾಲಿ ಸ್ಥಾನವನ್ನು ತುಂಬಲು ಹೊಸ ಸದಸ್ಯನನ್ನು ಮೂರು ತಿಂಗಳೊಳಗೆ ನಾಮನಿರ್ದೇಶನ

ಮಾಡತಕ್ಕದ್ದು ಹಾಗೂ ಅಂತಹ ಹೊಸ ಸದಸ್ಯನನ್ನು ಯಾವ ಸದಸ್ಯನ ಸ್ಥಾನಕ್ಕೆ ನಾಮನಿರ್ದೇಶನ ಮಾಡಲಾಗಿದೆಯೋ ಆ ಸದಸ್ಯನ ಉಳಿದಿರುವ ಪದಾವಧಿಗೆ ನಾಮನಿರ್ದೇಶನ ಮಾಡತಕ್ಕದ್ದು.

(10) ಮಂಡಲಿಯ ವ್ಯವಹರಣೆಗಳು, ಅಂತಹ ವ್ಯವಹರಣೆಗಳು ನಡೆದ ಸಮಯದಲ್ಲಿ ಮಂಡಲಿಯಲ್ಲಿ ಒಂದು ಅಥವಾ ಹೆಚ್ಚಿನ ಭರ್ತಿಮಾಡದ ಖಾಲಿಸ್ಥಾನವಿದ್ದ ಕಾರಣ ಮಾತ್ರದಿಂದಲೇ ಅಸಿಂಧುವಾಗತಕ್ಕದಲ್ಲ.

**4. ಮಂಡಲಿಯ ಪ್ರಕಾರ್ಯಗಳು.–** ಈ ಮುಂದಿನವು ಮಂಡಲಿಯ ಪ್ರಕಾರ್ಯಗಳಾಗಿರತಕ್ಕದ್ದು:–

(ಎ) ಕಾರ್ಖಾನೆಗಳ ಅಧಿಬೋಗದಾರ ಹಾಗೂ ಕಬ್ಬು ಬೆಳೆಗಾರರ ನಡುವೆ ಆರೋಗ್ಯಕರ ಸಂಬಂಧಗಳನ್ನು ಕಾಪಾಡಿಕೊಂಡು ಬರುವ ಮಾರ್ಗೋಪಾಯಗಳನ್ನು ಶಿಫಾರಸ್ಸು ಮಾಡುವುದು.

(ಬಿ) ಸರ್ಕಾರ ಅಥವಾ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮಂಡಲಿಗೆ ಕಳುಹಿಸಿಕೊಟ್ಟಿರುವ ಯಾವುದೇ ವಿಷಯದ ಬಗ್ಗೆ, ಅದರಲ್ಲೂ ವಿಶೇಷವಾಗಿ ಕಬ್ಬು ಖರೀದಿಯ ವಿನಿಯಮನದ ಸಂಬಂಧದಲ್ಲಿ ಸಲಹೆಗಳನ್ನು ನೀಡುವುದು;

(ಸಿ) ಅಧಿನಿಯಮದ ಹಾಗೂ ಅದರ ಮೇರೆಗೆ ರಚಿಸಲಾದ ನಿಯಮಗಳ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿದ ಪ್ರಕರಣಗಳನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಗಮನಕ್ಕೆ ತರುವುದು ಹಾಗೂ ಅದನ್ನು ತಡೆಗಟ್ಟಲು ಸಲಹೆಗಳನ್ನು ಮಾಡುವುದು;

(ಡಿ) ವಿವಿಧ ಪ್ರದೇಶಗಳಲ್ಲಿ ಕಬ್ಬಿನ ತಳಿಗಳನ್ನು ಬೆಳೆಯಲು ಸೂಕ್ತವಾಗಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಸರ್ಕಾರಕ್ಕೆ ಸಲಹೆ ನೀಡುವುದು;

(ಇ) ಕಬ್ಬು ಅಭಿವೃದ್ಧಿ ಕಾರ್ಯದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರಿಗೆ ಸಲಹೆ ನೀಡುವುದು.

(ಎಫ್) ಸಕ್ಕರೆ, ಕಬ್ಬಿನ ಸಿಪ್ಪೆ, ಕಾಕಂಬಿ ಮತ್ತು ಪ್ರೆಸ್‌ಮಡ್‌ಗಳಿಂದ ಬರುವ ಆದಾಯವನ್ನು ಪರಿಗಣನೆಗೆ ತೆಗೆದುಕೊಂಡು ಆದಾಯ ಹಂಚಿಕೆ ಸೂತ್ರದ ಆಧಾರದ ಮೇಲೆ ಕಬ್ಬಿನ ಬೆಲೆಯನ್ನು ನಿರ್ಧರಿಸುವುದು.

**5. ಕಾರ್ಖಾನೆಗಳಲ್ಲಿ ಬಳಸಲು ಸೂಕ್ತವಲ್ಲದ ಕಬ್ಬಿನ ತಳಿಗಳನ್ನು ಘೋಷಿಸುವ ಅಧಿಕಾರಗಳು.–** ಸರ್ಕಾರವು, ಕಬ್ಬು ನಿಯಂತ್ರಣ ಮಂಡಲಿಯ ಶಿಫಾರಸ್ಸುಗಳ ಮೇಲೆ, ಅಂತಹ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಪ್ರದೇಶದಲ್ಲಿ ಬೆಳೆಯುವ ಕಬ್ಬಿನ ತಳಿಯನ್ನು ಸೂಕ್ತವಲ್ಲದ ವಿಧದ ಕಬ್ಬಿನ ತಳಿಯೆಂದು ಘೋಷಿಸಬಹುದು ಮತ್ತು ಹಾಗೆ ಘೋಷಿಸಲಾದಂತಹ ವಿಧದ ಕಬ್ಬಿನ ತಳಿಯ ಕಬ್ಬನ್ನು ಯಾವುದೇ ಕಾರ್ಖಾನೆಯು ಖರೀದಿಸತಕ್ಕದ್ದಲ್ಲ.

**6. ಕೆಲವು ಬಗೆಯ ಕಬ್ಬಿನ ತಳಿಗಳ ಬಿತ್ತನೆ ಬೀಜಗಳ ವಿತರಣೆಯ ನಿಷೇಧ.–** ಕಾರ್ಖಾನೆಯ ಅಧಿಭೋಗದಾರ ಅಥವಾ ಆತನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಯಾರೇ ಇತರ ವ್ಯಕ್ತಿಯು, 5ನೇ ಪ್ರಕರಣದ ಮೇರೆಗೆ ಸೂಕ್ತವಲ್ಲದ ವಿಧದ ಕಬ್ಬಿನ ತಳಿಯೆಂದು ಸರ್ಕಾರವು ಘೋಷಿಸಿದ್ದರೆ, ಯಾವುದೇ ಪ್ರದೇಶದಲ್ಲಿ ಯಾರೇ ವ್ಯಕ್ತಿಗೆ ಅಂತಹ ತಳಿಯನ್ನು ವಿತರಿಸತಕ್ಕದ್ದಲ್ಲ, ಮತ್ತು ಅಂತಹ ತಳಿಯ ಕಬ್ಬಿನ ಬಿತ್ತನೆಯನ್ನು ಮಾಡತಕ್ಕದ್ದಲ್ಲ.

**7. ಮೀಸಲು ಪ್ರದೇಶದಲ್ಲಿ ಕಬ್ಬಿನ ಖರೀದಿ.–** (1) ಮೀಸಲು ಪ್ರದೇಶದಲ್ಲಿಯ ಕಬ್ಬು ಬೆಳೆಗಾರನು ಯಾವ ಕಾರ್ಖಾನೆಗೆ ಆ ಪ್ರದೇಶವನ್ನು ಹಾಗೆ ಮೀಸಲಿರಿಸಲಾಗಿದೆಯೋ, ಆ ಕಾರ್ಖಾನೆಯ ಅಧಿಬೋಗದಾರನಿಗೆ ಬೆಳೆದ ಕಬ್ಬನ್ನು ಮಾರಾಟ ಮಾಡಬಹುದು.

(2) ಕಾರ್ಖಾನೆಯು (1)ನೇ ಉಪ–ಪ್ರಕರಣಕ್ಕೆ ಅನುಸಾರವಾಗಿ ಕೊಡಲೊಪ್ಪಿದ ಕಬ್ಬನ್ನು ಖರೀದಿಸುವ ಉದ್ದೇಶಕ್ಕಾಗಿ ಕಬ್ಬು (ನಿಯಂತ್ರಣ) ಆದೇಶ, 1966ರ 6ನೇ ಖಂಡದಲ್ಲಿ ನಿರ್ದಿಷ್ಟಪಡಿಸಲಾದಂತಹ ನಿಬಂಧನೆಗಳು ಹಾಗೂ ಷರತ್ತುಗಳ ಮೇಲೆ, ಅಂತಹ ರೀತಿಯಲ್ಲಿ, ಅಂತಹ ದಿನಾಂಕದೊಳಗೆ ಕಬ್ಬು ಬೆಳೆಗಾರರೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

(3) ಮೇಲೆ ಸೂಚಿಸಲಾದ ಕಾರ್ಖಾನೆಯನ್ನು ಹೊರತುಪಡಿಸಿ ಯಾರೇ ಇತರ ವ್ಯಕ್ತಿಯು (2)ನೇ ಉಪ–ಪ್ರಕರಣದ ಮೇರೆಗಿನ ಒಪ್ಪಂದಕ್ಕೆ ಅನುಸಾರವಾಗಿ ಹೊರತು ಕಬ್ಬು ಬೆಳೆಗಾರರು ಬೆಳೆದ ಕಬ್ಬನ್ನು ಖರೀದಿಸತಕ್ಕದ್ದಲ್ಲ ಅಥವಾ ಖರೀದಿಸಲು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದಲ್ಲ.

**8. ತೂಕ.–** (1) ಕಬ್ಬಿನ ಖರೀದಿ ಹಾಗೂ ಪೂರೈಕೆಗೆ ಸಂಬಂಧಿಸಿದ ಎಲ್ಲಾ ವ್ಯವಹಾರಗಳು ಹಾಗೂ ಕರಾರುಗಳನ್ನು ತೂಕಗಳು ಹಾಗೂ ಬಹುವಿಧದ ಅಥವಾ ಅದರ ಉಪವಿಧಗಳ ಮೆಟ್ರಿಕ್ ಪದ್ಧತಿಗನುಸಾರವಾಗಿ ಮಾಡತಕ್ಕದ್ದು ಹಾಗೂ ಎಲ್ಲಾ ತೂಕಗಳನ್ನು ತೂಕದ ಯಂತ್ರದ ಸಾಧನಗಳ ಮೂಲಕ ಮಾಡತಕ್ಕದ್ದು ಹಾಗೂ ಸಮೀಪದ 1/20ರ ಕ್ವಿಂಟಾಲ್‌ಗೆ ಸರಿಯಾಗಿ ದಾಖಲಿಸತಕ್ಕದ್ದು.

(2) ಸಮರ್ಪಕವಲ್ಲದ ತಕ್ಕಡಿಗಳು ಅಥವಾ ತೂಕದ ಯಂತ್ರಗಳನ್ನು ಅಧಿಭೋಗದಾರನು ಅಥವಾ ಅವನ ಪರವಾಗಿ ವ್ಯಕ್ತಿಯು ಬಳಸತಕ್ಕದ್ದಲ್ಲ, ಇಟ್ಟುಕೊಳ್ಳತಕ್ಕದ್ದಲ್ಲ ಅಥವಾ ಹೊಂದತಕ್ಕದ್ದಲ್ಲ ಅಥವಾ 1/20ರ ಸಮೀಪದ ಕ್ವಿಂಟಾಲ್‌ನ ತೂಕಕ್ಕೆ ಹಾಗೂ ಬಹುವಿಧದ ಹಾಗೂ ಅದರ ಉಪ ವಿಧಗಳ ಮೆಟ್ರಿಕ್ ಪದ್ಧತಿಗೆ ಅನುಸಾರವಾಗಿರದ ದಾಖಲಿಸಲಾದ ತೂಕವನ್ನು ಕಬ್ಬು ಬೆಳೆಗಾರರಿಗೆ ಸುಲಭವಾಗಿ ಓದಲು ಸಾಧ್ಯವಾಗುವುದಿಲ್ಲವೋ ಅಂತಹ ತೂಕದ ಯಂತ್ರವನ್ನು ಉಪಯೋಗಿಸತಕ್ಕದ್ದಲ್ಲ:

ಪರಂತು, ಐದು ಕಿಲೋಗ್ರಾಂಗಳವರೆಗೆ ಅಥವಾ ಶೇಕಡಾ ಒಂದರಷ್ಟು ಅಂತರದ ತೂಕದ ವ್ಯತ್ಯಾಸ ಇವೆರಡರಲ್ಲಿ ಯಾವುದು ಕಡಿಮೆಯೋ ಅಂತಹ ವ್ಯತ್ಯಾಸವನ್ನು ಪರಿಗಣನೆಗೆ ತೆಗೆದು ಕೊಳ್ಳಬಾರದು:

ಮತ್ತು ಪರಂತು, ಸರಿಮಾಡಲು ಅಸಾಧ್ಯವಾದ ತೂಕದ ಯಂತ್ರವು ಸರಿಯಾದ ತೂಕದ ಶೇಕಡ ಒಂದರಷ್ಟು ವ್ಯತ್ಯಾಸ ತೂಗುವುದನ್ನು ಸಮರ್ಪಕವಾಗಿಲ್ಲವೆಂದು ಭಾವಿಸತಕ್ಕದ್ದಲ್ಲ.

(3) ಬಳಸಲಾದ ಎಲ್ಲಾ ತಕ್ಕಡಿಗಳನ್ನು ಹಾಗೂ ತೂಕಗಳನ್ನು ಎಲ್ಲಾ ಯುಕ್ತ ಕಾಲಗಳಲ್ಲಿ ನೋಟೀಸು ನೀಡದೆ ಪರಿಶೀಲಿಸಲು ಅಥವಾ ಪರೀಕ್ಷೆಗೆ ಒಳಪಡಿಸಲು ಮುಕ್ತವಾಗಿರತಕ್ಕದ್ದು, ಹಾಗೂ ಅಧಿಭೋಗದಾರನು ಕಬ್ಬು ಬೆಳೆಗಾರರು ಅಥವಾ ಸರ್ಕಾರವು ಅಧಿಕೃತಗೊಳಿಸಿದ ಯಾರೇ ಇತರ ಅಧಿಕಾರಿಯು ಅಗತ್ಯಪಡಿಸಿದಾಗಲೆಲ್ಲ ಅಂತಹ ಪರಿಶೀಲನೆಗೆ ಅಥವಾ ಪರೀಕ್ಷೆಗೆ ಎಲ್ಲಾ ತಕ್ಕಡಿಗಳು, ತೂಕಗಳು ಲಭ್ಯವಾಗುವಂತೆ ಮಾಡತಕ್ಕದ್ದು.

(4) ಖರೀದಿಸಲಾದ ಕಬ್ಬಿನ ನಿವ್ವಳ ತೂಕದಲ್ಲಿ ಕೇಂದ್ರ ಸರ್ಕಾರವು ಕಟ್ಟು ಕಟ್ಟುವ ಸಾಮಗ್ರಿಗಳೆಂದು ಅನುಮತಿಸಿರುವುದಕ್ಕಿಂತ ಹೆಚ್ಚಿಗೆ ತೂಕವನ್ನು ಕಡಿಮೆಗೊಳಿಸತಕ್ಕದ್ದಲ್ಲ.

(5) ಕಾರ್ಖಾನೆಯ ಅಧಿಭೋಗದಾರನು ತೂಕದ ಯಂತ್ರದ ಬಳಿ ಸಾಕಷ್ಟು ಬೆಳಕಿನ ವ್ಯವಸ್ಥೆ, ಸಿದ್ಧತೆಯನ್ನು ಮಾಡಿದ ಹೊರತು ಸೂರ್ಯಾಸ್ತದ ತರುವಾಯ ಅರ್ಧಗಂಟೆಗಿಂತ ಹೆಚ್ಚು ಕಾಲ ಕಬ್ಬಿನ ತೂಕವನ್ನು ಮಾಡತಕ್ಕದ್ದಲ್ಲ.

(6) ಕಾರ್ಖಾನೆಯ ಅಧಿಭೋಗದಾರನು ರೈತರ ಪಾಸ್ ಪುಸ್ತಕಗಳಲ್ಲಿ ಪ್ರತಿಯೊಂದು ಎತ್ತಿನಗಾಡಿ, ಟ್ರಾಕ್ಟರ್, ಲಾರಿ ಅಥವಾ ಯಾವುದೇ ವಾಹನ ಆಗಮಿಸಿದ ಹಾಗೂ ನಿರ್ಗಮಿಸಿದ ಸಮಯವನ್ನು ದಾಖಲಿಸತಕ್ಕದ್ದು.

(7) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರಿಗೆ ತೃಪ್ತಿಕರವೆನಿಸುವಂತೆ ಸೂಕ್ತ ಸಿದ್ಧತೆಗಳನ್ನು ಎಲ್ಲಾ ಖರೀದಿ ಕೇಂದ್ರಗಳಲ್ಲಿ ಕಾರ್ಖಾನೆಯ ಅಧಿಭೋಗದಾರನು ಈ ಕೆಳಕಂಡ ವಿಷಯಗಳಲ್ಲಿ ಮಾಡತಕ್ಕದ್ದು:-

(ಎ) ದಟ್ಟಣೆಯನ್ನು ನಿವಾರಿಸಲು ವಾಹನಗಳ ಪ್ರವೇಶ ಹಾಗೂ ನಿಲುಗಡೆಯನ್ನು ನಿಯಂತ್ರಿಸುವುದು.

(ಬಿ) ತೂಕದ ಯಂತ್ರಗಳ ಸಮೀಪಕ್ಕೆ ರಸ್ತೆಗಳು ಹಾಗೂ ಸಂಪರ್ಕ ರಸ್ತೆಗಳು;

(ಸಿ) ದನಗಳ ಷೆಡ್ಡುಗಳು ಹಾಗೂ ನೀರಿನ ತೊಟ್ಟಿಗಳು

(ಡಿ) ಕ್ಯಾಂಟೀನ್, ಕುಡಿಯುವ ನೀರು, ಪ್ರಥಮ ಚಿಕಿತ್ಸಾ ಕೇಂದ್ರ ಹಾಗೂ ಇತರ ಮೂಲಸೌಕರ್ಯಗಳು

(8) ಕಬ್ಬು ಬೆಳೆಗಾರರ ಯಾರೇ ಪ್ರತಿನಿಧಿಗಳನ್ನು, ಕಬ್ಬಿನ ತೂಕದ ವೇಳೆಯಲ್ಲಿ ತೂಕಗಳನ್ನು ದಾಖಲಿಸುವಲ್ಲಿ ತೂಕಗಳನ್ನು ನೋಡಲು ಅಥವಾ ಪರಿಶೀಲನೆ ಮಾಡಲು ಹಾಗೂ ದಾಖಲೆಗಳನ್ನು ಪರೀಕ್ಷಿಸಲು ಯಾವುದೇ ತೂಕಯಂತ್ರದ ಬಳಿ ಹಾಜರಿರಲು ಅನುಮತಿಸತಕ್ಕದ್ದು;

(9) ಯಾವುದೇ ಸಂದರ್ಭದಲ್ಲಿ ವಾಸ್ತವಿಕವಾಗಿ ತೂಕ ಮಾಡದೆ ಕಬ್ಬನ್ನು ಖರೀದಿಸತಕ್ಕದ್ದಲ್ಲ ಯಾವ ತೂಕದ ಯಂತ್ರದ ಮೂಲಕ ಅದರ ಹೊಂದಾಣಿಕೆಯನ್ನು ನಿಯಂತ್ರಿಸಲಾಗಿದೆಯೇ ಅಂತಹ ಯಂತ್ರದ ಭಾಗವನ್ನು ಸೂಕ್ತವಾಗಿ ಮೊಹರು ಹಾಕಿ ಅಥವಾ ಬೀಗ ಹಾಕಿ ಇಡತಕ್ಕದ್ದು;

(10) ಖರೀದಿ ಕೇಂದ್ರಗಳಲ್ಲಿರುವ ಎಲ್ಲಾ ತೂಕದ ಯಂತ್ರ ಅಥವಾ ತಕ್ಕಡಿಗಳನ್ನು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಈ ಸಂಬಂಧದಲ್ಲಿ ನಾಮ ನಿರ್ದೇಶಿಸಿದ ಯಾರೇ ವ್ಯಕ್ತಿಯ ಸಮ್ಮುಖದಲ್ಲಿ ಕನಿಷ್ಠ ಪಕ್ಷ ಒಂದು ವಾರಕ್ಕೊಮ್ಮೆ ಪರೀಕ್ಷಿಸತಕ್ಕದ್ದು ಹಾಗೂ ಅಂತಹ ಪರೀಕ್ಷೆಗಳ ದಾಖಲೆಯನ್ನು ಯುಕ್ತವಾಗಿ ನಿರ್ವಹಿಸತಕ್ಕದ್ದು. ಪರೀಕ್ಷೆಯ ವೇಳೆಯಲ್ಲಿ ಹಾಜರಿರಲು ಬಯಸುವ ಯಾರೇ ಕಬ್ಬು ಬೆಳೆಗಾರನಿಗೆ ಸಹ ಹಾಗೆ ಹಾಜರಿರಲು ಅನುಮತಿಸತಕ್ಕದ್ದು;

(11) ಘಟಕವಾರು ಕೋರಿಕೆ ಚೀಟಿಯಲ್ಲಿ ನಿರ್ದಿಷ್ಟಪಡಿಸಲಾದ ತೂಕದ ಶೇಕಡ ಹತ್ತರಷ್ಟವರೆಗೆ ಕಬ್ಬು ಬೆಳೆಗಾರನು ತಂದಿರುವ ಹೆಚ್ಚಿನ ಕಬ್ಬನ್ನು ಕಾರ್ಖಾನೆಯ ಅಧಿಭೋಗದಾರನು ಸ್ವೀಕರಿಸತಕ್ಕದ್ದು ಹಾಗೂ ಎಷ್ಟೇ ಕಡಿಮೆ ಪ್ರಮಾಣದ ತೂಕವನ್ನು ಸ್ವೀಕರಿಸಲು ಯಾವುದೇ ಆಕ್ಷೇಪಣೆಗಳು ಇರತಕ್ಕದ್ದಲ್ಲ.

**9. ಕಬ್ಬು ಬೆಳೆಗಾರರಿಗೆ ಹಣ ಸಂದಾಯ.–** (1) ಕಾರ್ಖಾನೆಯ ಅಧಿಭೋಗದಾರನು ಕಬ್ಬು ಸರಬರಾಜಾದ ಕೂಡಲೇ, ಕಬ್ಬು ಸರಬರಾಜಾದ ಹದಿನಾಲ್ಕು ದಿನಗಳೊಳಗೆ, ಕಬ್ಬು ಬೆಳೆಗಾರರಿಗೆ ಕಬ್ಬಿನ ಬೆಲೆಯನ್ನು ಸಂದಾಯ ಮಾಡಲು ಜವಾಬ್ದಾರನಾಗಿರತಕ್ಕದ್ದು.

(2) ಕಾರ್ಖಾನೆಯಲ್ಲಿ ದಾಖಲಿಸಲಾದ ಕಬ್ಬಿನ ತೂಕದ ಆಧಾರದ ಮೇಲೆ ಸಂದಾಯವನ್ನು ಮಾಡತಕ್ಕದ್ದು. ಸಂದಾಯವಾಗಬೇಕಾದ ಕಬ್ಬಿನ ದರವನ್ನು ಹತ್ತಿರದ ರೂಪಾಯಿಗೆ ಲೆಕ್ಕಹಾಕತಕ್ಕದ್ದು.

(3) ಕಾರ್ಖಾನೆಯ ಅಧಿಭೋಗದಾರನು, ತಾನು ಖರೀದಿಸಿದ ಕಬ್ಬಿಗೆ ಸಂಬಂಧಿಸಿದಂತೆ ಬಾಕಿಯಿರುವ ಎಲ್ಲಾ ಸಂದಾಯಗಳನ್ನು ಮಾಡಲು ಜವಾಬ್ದಾರನಾಗಿರತಕ್ಕದ್ದು ಹಾಗೂ ಕಾರ್ಖಾನೆಯ ಅಂತಹ ಅಧಿಭೋಗದಾರನು ಖರೀದಿಸಿದ ಕಬ್ಬಿಗೆ ಸಂದಾಯಗಳನ್ನು ಮಾಡಲು ತಪ್ಪಿದರೆ, ಅಂತಹ ಕಾರ್ಖಾನೆಯ ಅಧಿಭೋಗದಾರನು ಕಬ್ಬು ನಿಯಂತ್ರಣ ಆದೇಶ, 1966ರಲ್ಲಿ ನಿರ್ದಿಷ್ಟಪಡಿಸಲಾದಂತೆ ಅಂತಹ ಸಂದಾಯವು ಬಾಕಿ ಉಳಿದಿರುವ ದಿನಾಂಕದಿಂದ ಅದರ ಮೇಲಿನ ಬಡ್ಡಿಯೊಂದಿಗೆ ಅಂತಹ ಸಂದಾಯ ಮಾಡಲು ಜವಾಬ್ದಾರನಾಗಿರತಕ್ಕದ್ದು.

**10. ದಂಡ.–** ಯಾರೇ ವ್ಯಕ್ತಿಯು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿರುವ ಯಾವುದೇ ನಿಯಮಗಳ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿದರೆ, ಆತನು ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸ ಶಿಕ್ಷೆಯಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕದ್ದು.

**11. ಅಪರಾಧದ ಸಂಜ್ಞೇಯತೆ.–** ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಅಧಿಕೃತಗೊಳಿಸಿದ ಅಧಿಕಾರಿಯು ದೂರನ್ನು ನೀಡಿದ ಹೊರತು, 10ನೇ ಪ್ರಕರಣದ ಮೇರೆಗೆ ದಂಡನೀಯನಾಗಬಹುದಾದ ಯಾವುದೇ ಅಪರಾಧವನ್ನು ಯಾವುದೇ ನ್ಯಾಯಾಲಯವು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ಮೊದಲನೇ ದರ್ಜೆಯ ಮ್ಯಾಜಿಸ್ಟ್ರೇಟರಿಗಿಂತ ಕೆಳಗಿನ ನ್ಯಾಯಾಲಯವು ಅಂಥ ಯಾವುದೇ ಅಪರಾಧದ ಅಧಿವಿಚಾರಣೆ ಮಾಡತಕ್ಕದ್ದಲ್ಲ.

**12. ಅಪರಾಧಗಳನ್ನು ರಾಜಿ ಮಾಡಲು ಅಧಿಕಾರ.–** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ಮಾಡಲಾದ ನಿಯಮಗಳ ಅಡಿಯಲ್ಲಿನ ಅಪರಾಧದ ಆರೋಪಿತ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದ ನಂತರ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಅಥವಾ ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ಇತರ ಅಧಿಕಾರಿಯು ಈ ಪ್ರಕರಣದ ಬಗ್ಗೆ ತೀರ್ಪನ್ನು ಘೋಷಿಸುವುದಕ್ಕೆ ಮುಂಚೆ ಯಾವುದೇ ಹಂತದಲ್ಲಿ ಅಂತಹ ಅಪರಾಧದ ಸಂಬಂಧದಲ್ಲಿ ರಾಜಿಯ ರೂಪದಲ್ಲಿ ಹತ್ತು ಸಾವಿರ ರೂಪಾಯಿಗಳನ್ನು ಮೀರದ ಮೊತ್ತದ ಹಣವನ್ನು ಅವನಿಂದ ಸ್ವೀಕರಿಸಿ ಸರ್ಕಾರಕ್ಕೆ ಜಮೆ ಮಾಡತಕ್ಕದ್ದು.

(2) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಈ ಪ್ರಕರಣದ ಮೇರೆಗೆ ಅಪರಾಧದ ಸಂಬಂಧದಲ್ಲಿ ಉಪಪ್ರಕರಣ (1)ರಲ್ಲಿ ರಾಜಿಯನ್ನು ಮಾಡಿದಾಗ, ಕಾರ್ಖಾನೆಯ ಅಧಿಭೋಗದಾರ ಅಥವಾ ಯಾರೇ ಇತರ ವ್ಯಕ್ತಿಯು 10ನೇ ಪ್ರಕರಣದ ಮೇರೆಗೆ ಅಂಥ ಅಪರಾಧದ ಸಂಬಂಧದಲ್ಲಿನ ಕಾನೂನು ಕ್ರಮಕ್ಕೆ ಅಥವಾ ಯಾವುದೇ ಇತರ ಹೆಚ್ಚಿನ ದಂಡಕ್ಕೆ ಗುರಿಯಾಗತಕ್ಕದ್ದಲ್ಲ.

13. **ಕಂಪೆನಿಗಳು, ಫರ್ಮ್‌ಗಳು ಹಾಗೂ ಪಾಲುದಾರಿಕೆಗಳಿಂದ ಅಪರಾಧಗಳು.–** ಸಕ್ಕರೆ ಕಾರ್ಖಾನೆಯ ಅಧಿಭೋಗದಾರನು ಒಂದು ಕಂಪೆನಿ, ಫರ್ಮ್ ಅಥವಾ ಪಾಲುದಾರ ಅಥವಾ ಸಂಘ ಅಥವಾ ಇತರ ಸಂಸ್ಥೆಯಾಗಿದ್ದಲ್ಲಿ, ಸಂದರ್ಭಾನುಸಾರ ಅದರ ಒಬ್ಬ ಅಥವಾ ಹೆಚ್ಚಿನ ಪಾಲುದಾರರು ಅಥವಾ ಸದಸ್ಯರು ಅಥವಾ ನಿರ್ದೇಶಕರನ್ನು ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಅಪರಾಧಕ್ಕಾಗಿ ಆತನ ವಿರುದ್ಧ ಕಾನೂನು ಕ್ರಮ ಜರುಗಿಸತಕ್ಕದ್ದು ಮತ್ತು ದಂಡಿಸತಕ್ಕದ್ದು.

14. **ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸಾರ್ವಜನಿಕ ನೌಕರರಾಗಿರುವುದು.–** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಹಾಗೂ ಈ ಅಧಿನಿಯಮದ ಮೇರೆಗೆ ನೇಮಕಗೊಂಡ ಪ್ರತಿಯೊಬ್ಬ ಅಧಿಕಾರಿಯನ್ನು ಭಾರತ ದಂಡ ಸಂಹಿತೆ, 1860ರ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

15. **ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಲಾದ ಯಾವುದೇ ನಿಯಮದ ಅಥವಾ ಆದೇಶದ ಯಾವುದೇ ಉಪಬಂಧಗಳಿಗನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಸರ್ಕಾರದ ಅಥವಾ ಯಾರೇ ಅಧಿಕಾರಿಯ ಅಥವಾ ನೌಕರನ ವಿರುದ್ಧ ಯಾವುದೇ ದಾವೆ, ಕಾನೂನು ಕ್ರಮ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

16. **ನಿಯಮಗಳನ್ನು ರಚಿಸುವ ಅಧಿಕಾರ.–**(1) ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ನಿರ್ದಿಷ್ಟವಾಗಿ ಮತ್ತು ಮೇಲೆ ಹೇಳಲಾದ ಅಧಿಕಾರಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು,–

(ಎ) ಕಬ್ಬು ನಿಯಂತ್ರಣ ಮಂಡಲಿಯ ವ್ಯವಹಾರ ನಿರ್ವಹಣೆ ಪ್ರಕ್ರಿಯೆ;

(ಬಿ) ಯಾವ ನಮೂನೆಯಲ್ಲಿ ಯಾವ ನೋಟೀಸನ್ನು ನೀಡತಕ್ಕದ್ದೋ ಆ ನಮೂನೆ

(3) ಕಬ್ಬಿನ ಖರೀದಿಗಾಗಿ ಮಾಡಿಕೊಳ್ಳಬೇಕಾದ ಒಪ್ಪಂದದ ನಮೂನೆ, ಯಾವ ದಿನಾಂಕದಲ್ಲಿ ಅಂತಹ ಒಪ್ಪಂದವನ್ನು ಮಾಡಿಕೊಳ್ಳಬೇಕೋ ಆ ದಿನಾಂಕ ಹಾಗೂ ಅದರ ನಿಬಂಧನೆಗಳು ಮತ್ತು ಷರತ್ತುಗಳು;

(4) ಕಬ್ಬಿನ ಸರಿಯಾದ ತೂಕವನ್ನು ಮಾಡುವಿಕೆ, ತೂಕ ಮಾಡಲು ಹಾಗೂ ತೂಕಗಳನ್ನು ಪರೀಕ್ಷಿಸಲು ಸೌಲಭ್ಯಗಳನ್ನು ಕಲ್ಪಿಸುವುದು ಹಾಗೂ ತೂಕಗಳನ್ನು ಮಾಡುವ ಸಮಯ; ಹಾಗೂ

(5) ಈ ಅಧಿನಿಯಮದ ಮೇರೆಗೆ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ.

– ಇವುಗಳಿಗಾಗಿ ಉಪಬಂಧಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| **ಭಾಗ – IV-A** | **ಬೆಂಗಳೂರು, ಬುಧವಾರ, ಮಾರ್ಚ್ ೧೩, ೨೦೧೩ (ಫಾಲ್ಗುಣ ೨೨, ಶಕ ವರ್ಷ ೧೯೩೪)** | **ನಂ. ೫೭೨** |
| **Part – IV-A** | **Bangalore, Wednesday, March 13, 2013 (Phalguna 22, Shaka Varsha 1934)** | **No. 572** |



## PARLIAMENTARY AFFAIRS AND LEGISLATION SECRETARIAT

### NOTIFICATION

### NO: SAMVYASHAE 46 SHASANA 2012, Bangalore, dated: 13.03.2013

Ordered that the translation of the ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) (ತಿದ್ದುಪಡಿ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 05) in the English language, be published as authorised by His Excellency the Governor of Karnataka under clause (3) of Article 348 of the constitution of India in the Karnataka Gazette for general information.

The following translation of the ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) (ತಿದ್ದುಪಡಿ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 05) in the English language is published in the Official Gazette under the authority of His Excellency the Governor of Karnataka under clause (3) of Article 348 of the Constitution of India.

### KARNATAKA ACT NO. 05 OF 2013

(First published in the Karnataka Gazette Extra-ordinary on the Eleventh day of January, 2013)

## THE KARNATAKA LOCAL AUTHORITIES (PROHIBITION OF DEFECTION) (AMENDMENT) ACT, 2012

(Received the assent of the Governor on the Tenth day of January, 2013)

An Act further to amend the Karnataka Local Authorities (Prohibition of Defection) Act, 1987.

Whereas it is expedient further to amend the Karnataka Local Authorities (Prohibition of Defection) Act, 1987 (Karnataka Act 20 of 1987) for the purposes hereinafter appearing;

Be it enacted by the Karnataka State Legislature in the sixty third year of the Republic of India as follows:-

**1. Short title and commencement.-** (1) This Act may be called the Karnataka Local Authorities (Prohibition of Defection) (Amendment) Act, 2012.

(2) It shall come into force at once.

**2. Amendment of section 4.-** In the Karnataka Local Authorities (Prohibition of Defection) Act, 1987 (Karnataka Act 20 of 1987), in section 4, in sub-section (2), for the words "thirty days", the words "Sixty days" shall be substituted.

The above translation of ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) (ತಿದ್ದುಪಡಿ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ:05) be published in the Official Gazette under clause (3) of Article 348 of the Constitution of India.

**H.R.BHARDWAJ**
GOVERNOR OF KARNATAKA

By Order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೧೩, ೨೦೧೩ (ಫಾಲ್ಗುಣ ೨೨, ಶಕ ವರ್ಷ ೧೯೩೪) | ನಂ. ೫೭೩ |
| **Part – IV-A** | **Bangalore, Wednesday, March 13, 2013 (Phalguna 22, Shaka Varsha 1934)** | **No. 573** |


## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 34 SCR 2012, Bangalore, Date:12.03.2013

The draft of the following rules further to amend the Karnataka Civil Services (Direct Recruitment by Competitive Examinations and Selection)(General) Rules, 2006, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore-560001.

**DRAFT RULES**

**1. Title and commencement.-** (1) These rules may be called the Karnataka Civil Services (Direct Recruitment by Competitive Examinations and Selection) (General) (Amendment) Rules, 2013.

(2) They shall come into force from the date of their publication in the Official Gazette.

**2. Amendment of rule 5.-** In the Karnataka Civil Services (Direct Recruitment by Competitive Examinations and Selection (General )Rules, 2006 (hereinafter referred to as the said rules) for rule 5 and entries relating thereto, the following shall be substituted, namely:-

**"5. Method of Selection.-** The method of selection for direct recruitment under these rules shall be on the basis of percentage of total marks secured in the Competitive Examination and the marks secured in an interview conducted by the Commission under rule 6 in respect of Technical and Non-technical posts."

**3. Amendment of rule 6.-** For rule 6 and entries relating there under of the said rules, the following shall be substituted, namely:-

**"6. Selection of Candidates Eligible for Interview.-** (1) The Commission shall conduct a competitive examination in the following manner, namely;-

(a) The examination shall be in the form of objective multiple choice consisting of two written papers carrying 200 marks each, namely:-

**(i) Paper-1.-** General Paper:- Covering General Knowledge topics relating to Current Events, General Sciences, Indian History, Indian Geography, Social Sciences, General Mental Ability, matters of every day observation and practical knowledge as may be expected of a person who has passed the prescribed qualifying examination.

**(ii) Paper-II.-** Specific paper:- The content of this paper shall be determined by the Commission keeping in view the nature of the job for which the selection is being made and the qualifying examination in consultation with the head of the field department or the appointing authority concerned.

(b) The papers shall be set in both Kannada and English. A candidate may answer the papers either wholly in Kannada or in English but not in both:

Provided that if two or more candidates secure equal marks in the competitive examination, the order of merit of such candidates shall be fixed on the basis of their age, the person older in age being placed higher in the order of the merit.

(2) A list of candidates shall be prepared in the order of merit determined on the basis of the percentage of total marks secured by the candidates in the above competitive examination.

(3) Subject to reservation policy of the State, from among the candidates whose names are included in such list such number of candidates as is equal to three times the number of vacancies notified, shall be called for the interview.

(4) The maximum marks for interview shall be 12.50% of total marks prescribed for the Competitive Examination."

**4. Amendment of rule 8.-** For rule 8 and entries relating there under of the said rules, the following shall be substituted, namely:-

**"8. Final Selection list of candidates.-** (1) The Commission shall prepare a final selection list of candidates eligible for appointment on the basis of merit determined on the basis of percentage of total marks secured in the Competitive Examination and Interview and taking into consideration the reservation policy of the State equal to the number of vacancies notified.

(2) The final selection list prepared under sub-rule (1) shall be published in the Karnataka Gazette and in such other mass media as the Commission may deem fit and in such manner as the State Government may direct and a copy thereof shall be sent to the Appointing Authority concerned, the fact of selection shall be intimated to the candidates selected by the Commission.

By Order and in the name of the Governor of Karnataka.

**Dr. MANGALA G.S**
Under Secretary to Government
Department of Personnel and
Administrative Reforms (Service Rules-1)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೪, ೨೦೧೩ (ಫಾಲ್ಗುಣ ೨೩, ಶಕ ವರ್ಷ ೧೯೩೪) | ನಂ. ೫೭೪ |
| **Part – IV-A** | **Bangalore, Thursday, March 14, 2013 (Phalguna 23, Shaka Varsha 1934)** | **No. 574** |


## HIGH COURT OF KARNATAKA

### NOTIFICATION

### NO.HCE 963/2012, Bangalore, Dated: 14TH MARCH 2013

### THE HIGH COURT OF KARNATAKA SERVICE (CONDITIONS OF SERVICE AND RECRUITMENT) (II AMENDEMENT) RULES, 2013

In exercise of powers conferred by Article 229 (1) and (2) of the Constitution of India, read with Rule 6, 7 and 11 of the High Court of Karnataka Service (Conditions of Service and Recruitment) Rules, 1973 and all other powers enabling thereunto, Hon'ble the Chief Justice, High Court of Karnataka with the previous approval of His Excellency the Governor of Karnataka makes the following rules to amend the High Court of Karnataka Service (Conditions of Service and Recruitment) Rules, 1973,

**Title and Commencement:** (1) These Rules may be called as the High Court Service (Conditions of Service and Recruitment) (II Amendment) Rules, 2013.

(2) They shall come into force on the date of publication in the Karnataka Gazette.

**Amendment to Schedule-II**

Under the heading Group-'C' the entry at Sl. No 58 (Typists), shall be amended as below:-

| Sl. No | Designation | Permanent | Temporary | Scale of Pay |
|---|---|---|---|---|
| **58** | **Typists** | 262 | 26 | 11600-200-12000-250-13000-300-14200-350-15600-400-17200-450-19000-500-21000. |

BY ORDER OF THE HON'BLE CHIEF JUSTICE,

**P. KRISHNA BHAT**
REGISTRAR GENERAL


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೪, ೨೦೧೩ (ಫಾಲ್ಗುಣ ೨೩, ಶಕ ವರ್ಷ ೧೯೩೪) | ನಂ. ೫೭೫ |
| **Part – IV-A** | **Bangalore, Thursday, March 14, 2013 (Phalguna 23, Shaka Varsha 1934)** | **No. 575** |


## MINORITY WELFARE, HAJ & WAKF SECRETARIAT

### NOTIFICATION

### No: MWD 11 WHJ 2013 (P1), Bangalore, Dated : 14-03-2013

The Government of Karnataka, by virtue of its powers conferred under Section 26 (1) and (2) of the Haj Committee Act, 2002 notifies that the person noted here under is appointed as Member of the Karnataka State Haj Committee consequent upon resignation of Sri. Syed Ali Bin Haji Syed Abdulrauf Sab nominated from representative of voluntary organization. He should hold the office as the Member of the Haj Committee, as long as his predecessor to whose place he has been appointed, would have been entitled to hold office if such vacancy had not occurred:

| Sl. No. | Name of the Member & Address | Category of Nomination |
|---|---|---|
| 1 | Sri. Thafazul Ahmed S/o Sharieff Sab<br>No.14, 6th Main, 3rd Cross, Maruti Layout, Bangalore-560 029<br>Mo. No. 94480 50887 | Nominated from Representative of Voluntary Organization. |

By Order and in the name of the Governor of Karnataka

**ABBAS SHARIEFF**
Under Secretary to Government
Minority Welfare, Haj &
Wakf Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಮಾರ್ಚ್ ೧೪, ೨೦೧೩ (ಫಾಲ್ಗುಣ ೨೩, ಶಕ ವರ್ಷ ೧೯೩೪) | ನಂ. ೫೭೬ |
|---|---|---|
| **Part – I** | **Bangalore, Thursday, March 14, 2013 (Phalguna 23, Shaka Varsha 1934)** | **No. 576** |


## MINORITY WELFARE, HAJ AND WAKF SECRETARIAT

## PROCEEDINGS OF THE GOVERNMENT OF KARNATAKA

**Sub**: Appointment of Sri Syed Shaik Sha vali Khazi as Khazi of Karatgi village, Gangavathi Taluk, Koppal District.

**Read**:
1. Application dated: 13-07-2010 of Managing Committee Jamiya Masjid, Karatgi.
2. Letter No. KSBW/ADM/CR/380/2010-11, dated: 16-10-2012 of the Chief Executive Officer, Karnataka State Board of Wakfs, Bangalore.
3. Letter No.Kom.Devasthana:10-11/72/1385, dated: 30-09-2010 from Tahsildar, Gangavathi Taluk, Koppal District.

**Preamble:**

Muslim Jamath of Managing Committee Jamiya Masjeed, Karatagi, in their representation read at (1) above has stated that Sri.Syed Saheb Peer Khazi was rendering the services of Khazaath of Karatgi village and its surrounding villages of Gangavathi Taluk, Koppal District without any objection since 25 years, but after he expired on 21-03-2009, the said managing committee of Karatagi has passed a resolution unanimously to appoint to Shri.Syed Shaik Vali Khazi s/o Late Syed Saheb Peeran Khazi as Khazi of Karatgi village alongwith 22 viilages.

The Chief Executive Officer, Karnataka State Board of Wakfs, Bangalore and Tahsildar, Shahpur in their letters read at (2) & (3) above while forwarding the report of the Wakf Officer, District Wakf Advisory Committee, Yadgir have recommended to appoint Sri Syed Shaik Shah Vali Khazi s/o Late Syed Saheb Peeran Khazi as Khazi of Karatgi village and its 22 surrounding villages as per the provisions of the Khazi Act, 1880. Hence, the order.

### GOVERNMENT ORDER NO. MWD 278 WES 2010, BANGALORE, DATED: 14-03-2013.

In exercise of the powers conferred under Section 2 of the Khazi Act, 1880, Government is pleased to appoint Sri Syed Shaik Shah Vali Khazi S/o Late Syed Saheb Peeran Khazi as Khazi of Karatgi village and its 22 surrounding villages of Gangavathi Taluk, Koppal District as shown in Annexure, with immediate effect and until further orders.

By Order and in the name of the Governor of Karnataka

**ABBAS SHARIEFF**
Under Secretary to Government
Minority Welfare Department

### ANNEXURE TO GOVERNMENT ORDER NO.MWD 278 WES 2010, DATED: 28-02-2013.

List of villages comes under Gangavathi Taluk, Koppal District.

| Sl. No. | Name of villages |
|---|---|
| 1. | Karatagi |
| 2. | J.P.Nagar,<br>Basaveshwaranagar,<br>Rajivgandhinagar,<br>Indiranagar,<br>Nazir Colony &<br>Karatagi Nagar |
| 3. | Pannapura |
| 4. | Jooratagi |
| 5. | K.Basaapura |
| 6. | Channalli |
| 7. | Mylapura |
| 8. | Durgacamp |

| | |
|---|---|
| 9. | Naganakal |
| 10. | Bevinala |
| 11. | Somanalacamp |
| 12. | Gudooru |
| 13. | Hagedaala |
| 14. | Tondihala |
| 15. | Challura |
| 16. | Challurucamp |
| 17. | Salanchimara |
| 18. | Ravinagara |
| 19. | Ganeshacamp |
| 20. | Hulkihaal |
| 21. | Maricamp |
| 22. | JaliHaal |

**ABBAS SHARIEFF**
Under Secretary to Government
Minority Welfare, Haj and Wakf Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೧೫, ೨೦೧೩ (ಫಾಲ್ಗುಣ ೨೪, ಶಕ ವರ್ಷ ೧೯೩೪) | ನಂ. ೫೭೭ |
|---|---|---|
| **Part – IV-A** | **Bangalore, Friday, March 15, 2013 (Phalguna 24, Shaka Varsha 1934)** | **No. 577** |

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 09 ಭೂದಾಪು 2012, ಬೆಂಗಳೂರು, ದಿನಾಂಕ:15–03–2013**

ಕರ್ನಾಟಕ ರಾಜ್ಯ ಸರ್ಕಾರವು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 (ಕರ್ನಾಟಕ 1964ರ ಅಧಿನಿಯಮ 12)ರ ಕಲಂ 4ರ ಉಪ ಕಲಂ (4)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ಪರಿಶಿಷ್ಟದ ಕಾಲಂ–2 ರಲ್ಲಿ ಸೂಚಿಸಿರುವ ಹೋಬಳಿಗೆ ಕಾಲಂ–3 ರಲ್ಲಿ ತೋರಿಸಿರುವ ಗ್ರಾಮಪಂಚಾಯತಿಗಳನ್ನು ಮತ್ತು ಕಾಲಂ–4 ರಲ್ಲಿ ತೋರಿಸಿರುವ ಗ್ರಾಮಗಳನ್ನು ಸೇರ್ಪಡಿಸಿ ಹೊಸ ಕಿತ್ತೂರು ತಾಲ್ಲೂಕನ್ನು ಸೃಷ್ಟಿಸುವ ಸಲುವಾಗಿ ಅಧಿಸೂಚನೆ ಕ್ರಮಾಂಕ ಆರ್‌ಡಿ 09 ಭೂದಾಪು 2012, ದಿನಾಂಕ:11–01–2013 ರಲ್ಲಿ ಪ್ರಕಟಿಸಿ ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ಭಾಗ–IV-A ದಿನಾಂಕ:11–01–2013 ರಲ್ಲಿ ಪ್ರಕಟಿಸಿ ಈ ಸಂಬಂಧ ಬಾಧಿತರಾಗುವ ವ್ಯಕ್ತಿಗಳ ಆಕ್ಷೇಪಣೆ / ಸಲಹೆಗಳನ್ನು ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಅಧಿಸೂಚನೆಯನ್ನು ದಿನಾಂಕ:11–01–2013 ರಂದು ಸಾರ್ವಜನಿಕರಿಗೆ ದೊರಕಿಸಿಕೊಡಲಾಗಿದೆ.

ಈ ಸಂಬಂಧ ಯಾವುದೇ ಆಕ್ಷೇಪಣೆ / ಸಲಹೆಗಳು ರಾಜ್ಯ ಸರ್ಕಾರಕ್ಕೆ ಸ್ವೀಕೃತವಾಗಿರುವುದಿಲ್ಲ.

ಆದ್ದರಿಂದ, ಈಗ ಕರ್ನಾಟಕ ಸರ್ಕಾರವು ಕರ್ನಾಟಕ ಭೂಕಂದಾಯ ಅಧಿನಿಯಮ 1964 (ಕರ್ನಾಟಕ 1964ರ ಅಧಿನಿಯಮ 12) ಕಲಂ 4ರ ಉಪ ಕಲಂ(4) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪರಿಶಿಷ್ಟದಲ್ಲಿ ತೋರಿಸಿರುವಂತೆ ಗ್ರಾಮಪಂಚಾಯಿತಿಗಳು ಮತ್ತು ಗ್ರಾಮಗಳನ್ನೊಳಗೊಂಡಂತೆ ಹೊಸ ತಾಲ್ಲೂಕು ಕಿತ್ತೂರನ್ನು ರಚಿಸಿದೆ.

### ಪರಿಶಿಷ್ಟ

| ಕ್ರ. ಸಂ. | ಹೋಬಳಿ ಹೆಸರು | ಗ್ರಾಮ ಪಂಚಾಯತಿಯ ಹೆಸರು | ಗ್ರಾಮದ ಹೆಸರು |
|---|---|---|---|
| 1 | ಕಿತ್ತೂರ | 1) ಎಂ.ಕೆ. ಹುಬ್ಬಳ್ಳಿ | 1) ಎಂ.ಕೆ ಹುಬ್ಬಳ್ಳಿ<br>2) ವೀರಾಪೂರ<br>3) ಅಮರಾಪೂರ |
| | | 2) ದಾಸ್ತಿಕೊಪ್ಪ | 4) ದಾಸ್ತಿಕೊಪ್ಪ |
| | | 3) ದೇವರಶೀಗಿಹಳ್ಳಿ | 5) ದೇವರಶೀಗಿಹಳ್ಳಿ<br>6) ಮಾರ್ಗನಕೊಪ್ಪ |
| | | 4) ಕಾದ್ರೊಳ್ಳಿ | 7) ಕಾದ್ರೊಳ್ಳಿ |
| | | 5) ಹುಣಶೀಕಟ್ಟಿ | 8) ಹುಣಶೀಕಟ್ಟಿ |

| ಕ್ರ. ಸಂ. | ಹೋಬಳಿ ಹೆಸರು | ಗ್ರಾಮ ಪಂಚಾಯತಿಯ ಹೆಸರು | ಗ್ರಾಮದ ಹೆಸರು |
|---|---|---|---|
| | | 6) ತುರಮರಿ | 9) ತುರಮರಿ |
| | | 7) ಖೋದಾನಪೂರ | 10) ಖೋದಾನಪೂರ<br>11) ಕುಲಮನಟ್ಟಿ |
| | | 8) ಕಲಭಾಂವಿ | 12) ಕಲಭಾಂವಿ<br>13) ಕೊಟಬಾಗಿ |
| | | 9) ಅಂಬಡಗಟ್ಟಿ | 14) ಅಂಬಡಗಟ್ಟಿ<br>15) ಹುಲಿಕಟ್ಟಿ ಕೆ.ಎ<br>16) ಹೊನ್ನಿದಿಬ್ಬ |
| | | 10) ತಿಗಡೊಳ್ಳಿ | 17) ತಿಗಡೊಳ್ಳಿ<br>18) ತೇಗೂರ |
| | | 11) ಉಗರಕೋಡ | 19) ಉಗರಕೋಡ<br>20) ದೇಮಟ್ಟಿ<br>21) ಬಚ್ಚನಕೇರಿ<br>22) ತಿಮ್ಮಾಪೂರ |
| | | 12) ಹಿರೇನಂದಿಹಳ್ಳಿ | 23) ಹಿರೇನಂದಿಹಳ್ಳಿ<br>24) ಚಿಕ್ಕನಂದಿಹಳ್ಳಿ<br>25) ಜಮಳೂರ |
| | | 13) ಅವರಾದಿ | 26) ಅವರಾದಿ<br>27) ಮಲ್ಲಾಪುರ ಕೆ.ಎ<br>28) ಬಸ್ಸಾಪೂರ<br>29) ಶೀಗಿಹಳ್ಳಿ ಕೆ.ಎ<br>30) ಮೇಟ್ಯಾಲ |
| | | 14) ಬೈಲೂರ | 31) ಬೈಲೂರ<br>32) ದೇಗುಲಹಳ್ಳಿ |
| | | 15) ದೇಗಾಂವ | 33) ದೇಗಾಂವ<br>34) ಬಸರಕೋಡ<br>35) ಹೊನ್ನಾಪೂರ<br>36) ಗಿರಿಯಾಲ ಕೆ.ಎ<br>37) ಚನ್ನಾಪೂರ |
| | | 16) ಕಿತ್ತೂರ | 38) ಕಿತ್ತೂರ |
| | | 17) ನಿಚ್ಚಣಕಿ | 39) ನಿಚ್ಚಣಕಿ<br>40) ಡೊಂಬರಕೊಪ್ಪ<br>41) ಶಿವನೂರ<br>42) ಮರಿಗೇರಿ |
| | | 18) ಕುಲವಳ್ಳಿ | 43) ಕುಲವಳ್ಳಿ<br>44) ಕತ್ರಿದಡ್ಡಿ |

ರಾಜ್ಯ ಸರ್ಕಾರದ ಭೂಕಂದಾಯ ಕಾಯ್ದೆ 1964 ನೇದ್ದರ (ಕರ್ನಾಟಕ ಕಾಯ್ದೆ 12ರ)ಕಲಂ 4ರ ಉಪ ಕಲಂ(4)ರ ಮೇರೆಗೆ ಅಂತಿಮ ಅಧಿಸೂಚನೆ ಹೊರಡಿಸಿದೆ. ಈ ಅಧಿಸೂಚನೆಯು ತಕ್ಷಣದಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ
(ಸೇವೆಗಳು–3, ಪುನರ್ವಸತಿ & ಭೂಮಾಪನ)

# REVENUE SECRETARIAT

## NOTIFICATION

### No. RD 09 BHUDAPU 2012, Bangalore, dated:15-03-2013

WHEREAS, the draft Notification regarding the altering the limits of Kittur Hobli of Bailhongal Taluk to declare Kittur as a new Taluk in Belgaum District, Karnataka State was published as required by sub-section(4) of section 4 of Karnataka Land Revenue Act, 1964(Karnataka Act 12 of 1964) in Notification No. RD 09 Bhudapu 2012, Bangalore, dated 11the January 2013 in Part-IV-A of the Karnataka Gazette(Extra ordinary dated 11-01-2013) inviting objections or suggestions from all the persons likely to be affected thereby that the proposal will be taken into consideration on or after one month from the date of publication of the Notification in the Official Gazette.

AND WHEREAS, the said Gazette was made available to the public on 11-01-2013 AND WHEREAS, no objections and suggestions are received.

NOW, THEREFORE, in excise of the powers conferred by Sub-section(4) of Section 4 of Karnataka Land Revenue Act, 1964(Karnataka Act 12 of 1964) the Government of Karnataka hereby makes the following (alter the limits and constitute a new Kittur Taluk Comprising of Gram Panchayaths and villages as specified in the schedule below:-

**SCHEDULE**

| Sl. No. | Names of Hobli | Names of Gram Panchayath | Names of villages |
|---|---|---|---|
| 1 | Kittur | 1. M.K Hubbali | 1. M.K Hubbali<br>2. Veerapur<br>3. Amarapur |
| | | 2. Dastikoppa | 4. Dastikoppa |
| | | 3. Devarsigihalli | 5. Devarsigihalli<br>6. Marganakoppa |
| | | 4. Kadrolli | 7. Kadrolli |
| | | 5. Hunsikatti | 8. Hunsikatti |
| | | 6. Turmari | 9. Turmari |
| | | 7. Khodanpur | 10. Khodanpur<br>11. Kulmanatti |
| | | 8. Kalbavi | 12. Kalbavi<br>13. Kotbagi |
| | | 9. Ambadagatti | 14. Ambadagatti<br>15. Hulikatti.K.A<br>16. Honnidibbi |
| | | 10. Tigadolli | 17. Tigadolli<br>18. Tegur |
| | | 11. Ugurkod | 19. Ugurkod<br>20. Dematti<br>21. Bachankeri<br>22. Timmapur |
| | | 12. Hirenandhalli | 23. Hirenandihalli<br>24. Chikkanandihalli<br>25. Jamalur |
| | | 13. Avaradi | 26. Avaradi<br>27. Mallapur.K.A<br>28. Bassapur<br>29. Sigihalli.K.A<br>30. Matyal |
| | | 14. Bailur | 31. Bailur<br>32. Deglolli |
| | | 15. Degaon | 33. Degaon<br>34. Basarkod<br>35. Honnapur<br>36. Giriyal.K.A<br>37. Chennapur |
| | | 16. Kittur | 38. Kittur |

| Sl. No. | Names of Hobli | Names of Gram Panchayath | Names of villages |
|---|---|---|---|
| | | 17. Nichanki | 39. Nichanki<br>40. Dombarkoppa<br>41. Shivanur<br>42. Marigeri |
| | | 18. Kulavalli | 43. Kulavalli<br>44. Katridaddi |

This final notification issued under sub-section (4) of section 4 of the Karnataka Land Revenue Act 1964(Karnataka Act No.12 of 1964) with immediate effect.

By Order and in the name of the Governor of Karnataka

**M.K. BHARMARAJAPPA**
Deputy Secretary to Government
Revenue Department
(Service-3, REH & SSLR)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೧೫, ೨೦೧೩ (ಫಾಲ್ಗುಣ ೨೪, ಶಕ ವರ್ಷ ೧೯೩೪) | ನಂ. ೫೭೮ |
|---|---|---|
| **Part – IV-A** | **Bangalore, Friday, March 15, 2013 (Phalguna 24, Shaka Varsha 1934)** | **No. 578** |

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 41 ಶಾಸನ 2012, ಬೆಂಗಳೂರು, ದಿನಾಂಕ: 15.03.2013**

ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆ ವಿಧೇಯಕ, 2013ಕ್ಕೆ 2013ರ ಮಾರ್ಚ್ ತಿಂಗಳ ಹನ್ನೊಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 35 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 35**

(2013ರ ಮಾರ್ಚ್ ಹದಿನೈದನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆ ಅಧಿನಿಯಮ, 2013

(2013ರ ಮಾರ್ಚ್ ಹನ್ನೊಂದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಹಾಗೂ ತತ್ಸಂಬಂಧಿತ ವಲಯಗಳಿಗೆ ಮತ್ತು ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ಅಸಾಧಾರಣ ನೇತೃತ್ವ, ಸಂಶೋಧನೆ, ಜ್ಞಾನ ಮತ್ತು ವಿಚಾರಧಾರೆಗಳ ಅಭಿವೃದ್ಧಿಯ ಮೂಲಕ ಆರೋಗ್ಯ ವಿಜ್ಞಾನ ಕ್ಷೇತ್ರದಲ್ಲಿ ಒಂದು ರೂಢಮೂಲ ಬದಲಾವಣೆಯನ್ನು ಉತ್ತೇಜಿಸಿ, ಪರಿಕಲ್ಪಿಸಿ ಜಾರಿಗೆ ತರುವ ಉದ್ದೇಶದಿಂದ ಖಾಸಗಿ ವಲಯದಲ್ಲಿ ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವೊಂದನ್ನು ಒಂದು ಸಂಸ್ಥೆಯಾಗಿ ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಒಂದು ಅಧಿನಿಯಮ.

ಕರ್ನಾಟಕ ರಾಜ್ಯದಲ್ಲಿ ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಹಾಗೂ ತತ್ಸಂಬಂಧಿತ ವಲಯಗಳಿಗೆ ಮತ್ತು ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ಅಸಾಧಾರಣ ನೇತೃತ್ವ, ಸಂಶೋಧನೆ, ಜ್ಞಾನ ಮತ್ತು ವಿಚಾರಧಾರೆಗಳ ಅಭಿವೃದ್ಧಿಯ ಮೂಲಕ ಆರೋಗ್ಯ ವಿಜ್ಞಾನ ಕ್ಷೇತ್ರದಲ್ಲಿ ಒಂದು ರೂಢಮೂಲ ಬದಲಾವಣೆಯನ್ನು ಉತ್ತೇಜಿಸಿ, ಪರಿಕಲ್ಪಿಸಿ, ಜಾರಿಗೆ ತರುವ ಉದ್ದೇಶದಿಂದ ಖಾಸಗಿ ವಲಯದಲ್ಲಿ ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವೊಂದನ್ನು ಒಂದು ಸಂಸ್ಥೆಯಾಗಿ ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

### ಅಧ್ಯಾಯ – I

### ಪ್ರಾಥಮಿಕ

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆ ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪಿಸತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ಶೈಕ್ಷಣಿಕ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 25ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ಸಂಸ್ಥೆಯ ಶೈಕ್ಷಣಿಕ ಪರಿಷತ್ತು;

(2) "ಕಾರ್ಯಸೂಚಿ ವಿಷಯಗಳು", ಎಂದರೆ, ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಅಧ್ಯಕ್ಷರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಪ್ರಬಂಧಕರ ಮಂಡಳಿ ಅಥವಾ ವ್ಯವಸ್ಥಾಪನಾ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ಯಾವುದೇ ಸಮಿತಿಯವರು ಸಭೆಯಲ್ಲಿ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(3) "ಪ್ರಬಂಧಕರ ಮಂಡಳಿ" ಎಂದರೆ, 23ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಸಂಸ್ಥೆಯ ಪ್ರಬಂಧಕರ ಮಂಡಳಿ;

(4) "ವ್ಯವಸ್ಥಾಪನಾ ಮಂಡಳಿ" ಎಂದರೆ, 24ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಸಂಸ್ಥೆಯ ವ್ಯವಸ್ಥಾಪನಾ ಮಂಡಳಿ;

(5) "ಕ್ಯಾಂಪಸ್" ಎಂದರೆ, ಸಂಸ್ಥೆಯು ಸ್ಥಾಪಿಸಿದ, ನಿರ್ವಹಿಸಿದ ಯಾವುದೇ ಕ್ಯಾಂಪಸ್;

(6) "ಅಧ್ಯಕ್ಷರು" ಎಂದರೆ, ಪ್ರಾಯೋಜಕ ಸಂಸ್ಥೆಯ ಮುಖ್ಯಸ್ಥರು ;

(7) "ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ ಮತ್ತು ಕುಲಸಚಿವರು-(ಸಿಓಒ ಅಂಡ್ ಆರ್)" ಎಂದರೆ ಸಂಸ್ಥೆಯ ನಿರ್ದೇಶಕರು ನಾಮನಿರ್ದೇಶನ ಮಾಡಿ, ನೇಮಕ ಮಾಡಿದ ವ್ಯಕ್ತಿ ;

(8) "ಸಮಿತಿಗಳು" ಎಂದರೆ, ಸಂಸ್ಥೆಯ ವಿವಿಧ ಕಾರ್ಯಕರ್ತರು ಸಂದರ್ಭಾನುಸಾರವಾಗಿ ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ ಮತ್ತು ಯಾವುದೇ ಇತರ ಸಮಿತಿಗಳು ಒಳಗೊಳ್ಳುತ್ತವೆ;

(9) "ಘಟಕ ಕಾಲೇಜು" ಎಂದರೆ, ಭಾರತ ಅಥವಾ ವಿದೇಶಗಳಲ್ಲಿ ವಿಶ್ವವಿದ್ಯಾಲಯವು ಹೊಂದಿರುವ ಅಥವಾ ಸ್ಥಾಪಿಸಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(10) "ಡೀನ್" ಎಂದರೆ, ವಿದ್ಯಾಲಯದ ಡೀನರು;

(11) "ನಿರ್ದೇಶಕರು" ಎಂದರೆ, ಸಂಸ್ಥೆಯ ಸಮಗ್ರ ಕಾರ್ಯನಿರ್ವಹಣೆಗಾಗಿ ಹೊಣೆಗಾರರಾಗಿರುವ ಸಂಸ್ಥೆಯ ನಿರ್ದೇಶಕರಾಗಿ, ಅಧ್ಯಕ್ಷರು ಮತ್ತು ಪ್ರಬಂಧಕರ ಮಂಡಳಿಯು ನಾಮನಿರ್ದೇಶನ ಮಾಡಿ, ನೇಮಕ ಮಾಡಿದ ಸ್ವತಂತ್ರ ವ್ಯಕ್ತಿ;

(12) "ಹಣಕಾಸು ಸಮಿತಿ" ಎಂದರೆ, 27ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಸಂಸ್ಥೆಯ ಹಣಕಾಸು ಸಮಿತಿ;

(13) "ಪ್ರತಿಷ್ಠಾನ" ಎಂದರೆ, ಸ್ಥಳೀಯ ಆರೋಗ್ಯ ಪದ್ಧತಿಗಳ ಪುನ:ಚೇತನಗೊಳಿಸುವುದಕ್ಕೆ ಸ್ಥಾಪಿಸಿದ ಒಂದು ಪ್ರತಿಷ್ಠಾನವಾಗಿದ್ದು, ಇದೊಂದು ನೊಂದಾಯಿತವಾದ ಸಾರ್ವಜನಿಕ ನ್ಯಾಸವಾಗಿರುತ್ತದೆ;

(14) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(15) "ಸಂಸ್ಥೆ" ಎಂದರೆ ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಿದ ಹಾಗೂ ನಿಗಮಿತಗೊಳಿಸಿದ ಅಂತರ್ ವಿಷಯಗಳ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನಕ್ಕೆ (ಐಐಹೆಚ್ಎಸ್‌ಟಿ) ಸಂಬಂಧಿಸಿದಂತೆ ಸಂಸ್ಥೆ ಎಂದು ಕರೆಯಲ್ಪಡುವ ಒಂದು ವಿಶ್ವವಿದ್ಯಾಲಯ;

(16) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ವಿದ್ಯಾಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಪರಿಷತ್ತು, ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಪರಿಷತ್ತು ಮುಂತಾದವುಗಳು, ಉನ್ನತ ಶಿಕ್ಷಣದಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಗುಣಮಟ್ಟಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(17) "ನಿಯಮಿಸಲಾದುದು" ಎಂದರೆ, ಸರ್ಕಾರವು ನಿಯಮಗಳ ಮೂಲಕ ನಿಯಮಿಸಲಾದುದು;

(18) "ಸಂಶೋಧನಾ ಪರಿಷತ್ತು" ಎಂದರೆ, 26ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂಥ ಸಂಸ್ಥೆಯಲ್ಲಿ ಸಂಶೋಧನಾ ಮಾರ್ಗದರ್ಶನಕ್ಕೆ ವ್ಯವಸ್ಥಾಪನಾ ಮಂಡಳಿಯು ಸೃಜಿಸಿದ ಸಂಶೋಧನಾ ಪರಿಷತ್ತು;

(19) "ವಿದ್ಯಾಲಯ" ಎಂದರೆ, ಆಯುರ್ವೇದ ಅಂತರ್-ವಿಷಯಕ ವೈದ್ಯಕೀಯ ಮತ್ತು ಆಧುನಿಕ ತಿಳುವಳಿಕೆಯ ವ್ಯವಸ್ಥೆಗಳಿಗೆ ಸಂಬಂಧಿಸಿದ ವಿಶೇಷ ಕ್ಷೇತ್ರದೊಂದಿಗೆ ವ್ಯವಹರಿಸುವಂಥ ಸಂಸ್ಥೆಗಳಡಿಯಲ್ಲಿ ಕಾರ್ಯ ನಿರ್ವಹಿಸುವ ಒಂದು ಪ್ರಮುಖ ಶೈಕ್ಷಣಿಕ ಘಟಕ;

(20) ಈ ಅಧಿನಿಯಮಕ್ಕೆ ಸಂಬಂಧಿಸಿದಂತೆ "ಪ್ರಾಯೋಜಕ ಪ್ರಾಧಿಕಾರ" ಅಥವಾ "ಪ್ರಾಯೋಜಕ ಸಂಸ್ಥೆ" ಎಂದರೆ, ಪ್ರತಿಷ್ಠಾನ;

(21) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಪ್ರವಾಚಕರು ಅಥವಾ ಉಪನ್ಯಾಸಕರು ಅಥವಾ ಸಂಸ್ಥೆಯಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ಶೈಕ್ಷಣಿಕೇತರ ಆದರೆ ಶೈಕ್ಷಣಿಕ ಪರಿಷತ್ತು ಅನುಮೋದಿಸಿರುವ ವೃತ್ತಿಪರ ಹಿನ್ನೆಲೆಯನ್ನು ಹೊಂದಿರುವ ಯಾವೊಬ್ಬ ಸಂಪನ್ಮೂಲ ವ್ಯಕ್ತಿ;

(22) "ಅಂತರ್-ವಿಷಯ ಆರೋಗ್ಯ ವಿಜ್ಞಾನಗಳು" ಎಂದರೆ, ಜೈವಿಕ ವೈದ್ಯಕೀಯ, ಜೀವ ವಿಜ್ಞಾನಗಳು, ಸಾಮಾಜಿಕ ವಿಜ್ಞಾನಗಳು, ಇಂಜಿನೀಯರಿಂಗ್ ಮತ್ತು ನಿರ್ವಹಣಾ ಅಧ್ಯಯನಗಳೂ ಒಳಗೊಂಡಂತೆ ಇತರ ಜ್ಞಾನದ ವ್ಯವಸ್ಥೆಗಳೊಂದಿಗಿನ ಯಾವುದೇ ಭಾರತೀಯ ಸಾಂಪ್ರದಾಯಿಕ ಆರೋಗ್ಯ ವಿಜ್ಞಾನಗಳ ಅಂತರ್ ಮುಖ;

(23) "ವಿಶ್ವವಿದ್ಯಾಲಯ ಅನುದಾನ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956 (1956ರ ಕೇಂದ್ರ ಅಧಿನಿಯಮ 3)ರ 4ನೇ ಪ್ರಕರಣದಡಿಯಲ್ಲಿ ಸ್ಥಾಪಿಸಿದ ಆಯೋಗ ;

(24) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದಡಿಯಲ್ಲಿ ಸ್ಥಾಪಿತವಾದ ಅಂತರ್-ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನಗಳಿಗೆ ಸಂಬಂಧಿಸಿದ ಸಂಸ್ಥೆ;

## ಅಧ್ಯಾಯ- II

## ಸಂಸ್ಥೆ ಮತ್ತು ಪ್ರಾಯೋಜಕ ನಿಕಾಯ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವೊಂದನ್ನು ಒಂದು ಸಂಸ್ಥೆಯಾಗಿ ಸ್ಥಾಪಿಸುವ ಹಕ್ಕನ್ನು ಪ್ರತಿಷ್ಠಾನವು ಹೊಂದಿರತಕ್ಕದ್ದು.

(2) ಪ್ರತಿಷ್ಠಾನವು ರಾಜ್ಯ ಸರ್ಕಾರಕ್ಕೆ ಸಂಸ್ಥೆಯನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾಪವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:-

(i) ಪ್ರತಿಷ್ಠಾನದ ವಿವರಗಳೊಂದಿಗೆ ಸಂಸ್ಥೆಯ ಧ್ಯೇಯೋದ್ದೇಶಗಳು;

(ii) ಸಂಸ್ಥೆಯ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ಸಂಸ್ಥೆಯು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವ್ಯಾಸಂಗ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಶೈಕ್ಷಣಿಕ ವರ್ಷಗಳ ಅವಧಿಗಾಗಿ ಬಂಡವಾಳ ವೆಚ್ಚದ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಹಾಗೂ ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ವರಮಾನಗಳು ಮತ್ತು ಇತರ ನಿರೀಕ್ಷಿತ ವರಮಾನಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ವಿವರಗಳು, ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕ, ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿ ವೇತನದಲ್ಲಿ ನೀಡುವ ರಿಯಾಯಿತಿ ಅಥವಾ ವಿನಾಯತಿಯ ಪರಿಮಿತಿಯ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿಯನ್ನು ಪ್ರತಿಷ್ಠಾನವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ಸಂಸ್ಥೆಯಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ಸಂಸ್ಥೆಯು ಸ್ಥಾಪನೆಯಾಗುವುದಕ್ಕೆ ಮೊದಲು ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದ ಅಂಥ ಇತರ ಷರತ್ತುಗಳ ನೆರವೇರಿಕೆಯ ಹಂತ.

(4) ಸ್ವೀಕರಿಸಿದ ಪ್ರಸ್ತಾವಗಳನ್ನು ಪರೀಕ್ಷಿಸಲು ರಾಜ್ಯ ಸರ್ಕಾರವು, ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯರಾದ ಮೂರು ಸದಸ್ಯರುಗಳನ್ನು ಒಳಗೊಂಡ ಒಂದು ಪರಿಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡತಕ್ಕದ್ದು.

**4. ಸಂಸ್ಥೆಯ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಪರಿಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ಪ್ರತಿಷ್ಠಾನವು ಒದಗಿಸಿದ ವಿವರಗಳ ಆಧಾರದ ಮೇಲೆ, ಅದು ಸಾಕಷ್ಟು ಮೂಲ ಸೌಕರ್ಯಗಳನ್ನು ಹೊಂದಿದ್ದು, ಒಂದು ಸಂಸ್ಥೆಯನ್ನು ನಡೆಸಲು ಪ್ರತಿಷ್ಠಾನವು ಸಮರ್ಥವಾಗಿದೆಯೆಂದು ಅದು ಮನಗಂಡರೆ, ಅದು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ಪ್ರತಿಷ್ಠಾನಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, "ಅಂತರ್-ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆ" ಎಂಬ ಹೆಸರಿನ ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವೊಂದನ್ನು ಒಂದು ಸಂಸ್ಥೆಯಾಗಿ ರಾಜ್ಯದಲ್ಲಿ ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ಸಂಸ್ಥೆಯ ಕೇಂದ್ರಕಾರ್ಯಸ್ಥಾನವು ರಾಜ್ಯದಲ್ಲಿ, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದ ಅಂಥ ಸ್ಥಳದಲ್ಲಿ ಇರತಕ್ಕದ್ದು. ಸಂಸ್ಥೆಯು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು ರಾಜ್ಯದೊಳಗೆ ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗನುಸಾರವಾಗಿ ಹೊಂದಿರತಕ್ಕದ್ದು.

(4) ಮೊದಲ ಅಧ್ಯಕ್ಷರು ಮತ್ತು ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಮೊದಲ ನಿರ್ದೇಶಕರು, ಪ್ರಬಂಧಕ ಮಂಡಳಿಯ ಮೊದಲ ಸದಸ್ಯರುಗಳು, ವ್ಯವಸ್ಥಾಪನಾ ಮಂಡಳಿಯ ಹಾಗೂ ಶೈಕ್ಷಣಿಕ ಪರಿಷತ್ತಿನ ಮೊದಲ ಸದಸ್ಯರುಗಳು ಮತ್ತು ಇನ್ನು ಮುಂದೆ, ಅಂಥ ಅಧಿಕಾರಿಗಳು ಅಥವಾ ಸದಸ್ಯರುಗಳಾಗಬಹುದಾದಂಥ ಎಲ್ಲಾ ವ್ಯಕ್ತಿಗಳು, ಅಂಥ ಪದ ಅಥವಾ ಸದಸ್ಯತ್ವವನ್ನು ಹೊಂದಿರುವುದು ಮುಂದುವರೆಯುವವರೆಗೆ, ಒಂದು ನಿಗಮಿತ ನಿಕಾಯವನ್ನು ರಚಿಸತಕ್ಕದ್ದು ಮತ್ತು ಅದು ಸಂಸ್ಥೆಯ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪಪ್ರಕರಣದ ಅಡಿಯಲ್ಲಿ ಸಂಸ್ಥೆಯ ಸ್ಥಾಪನೆಗೆ ಮಂಜೂರಾತಿಯಾದ ಮೇಲೆ, ಸಂಸ್ಥೆಯ ಉದ್ದೇಶಕ್ಕಾಗಿ, ಪ್ರತಿಷ್ಠಾನವು ಆರ್ಜಿಸಿದ, ಸೃಜಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತು ಇತರ ಚರ ಮತ್ತು ಸ್ಥಿರ ಸ್ವತ್ತು, ಸಂಸ್ಥೆಯಲ್ಲಿ ನಿಹಿತವಾಗಿರತಕ್ಕದ್ದು.

(6) ಸಂಸ್ಥೆಯು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ಸಂಸ್ಥೆಯಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಸ್ವತ್ತುಗಳನ್ನು ಸಂಸ್ಥೆಯ ಉದ್ದೇಶಗಳಿಗೆ ಅನುಷಂಗಿಕವಾಗಿರುವುದನ್ನು ಹೊರತುಪಡಿಸಿ ಯಾವುದೇ ಇತರ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಘಟಕ ಕಾಲೇಜು, ಪ್ರಾದೇಶಿಕ ಕೇಂದ್ರಗಳು ಅಥವಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ಇತರ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗೆ ಒಳಪಟ್ಟು, ಸಂಸ್ಥೆಯು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**6. ನಿಗಮನಗೊಳಿಸುವುದರ ಪರಿಣಾಮ.–** ಗೊತ್ತುಪಡಿಸಿದ ದಿನಾಂಕದಂದು ಮತ್ತು ದಿನಾಂಕದಿಂದ,–

(ಎ) ಯಾವುದೇ ಕರಾರು ಅಥವಾ ಇತರೆ ಲಿಖಿತದಲ್ಲಿ ಅಂತರ-ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆಯ ಯಾವುದೇ ಉಲ್ಲೇಖವನ್ನು ಸಂಸ್ಥೆಯ ಉಲ್ಲೇಖದಂತೆ ಭಾವಿಸತಕ್ಕದ್ದು.

(ಬಿ) ಪ್ರತಿಷ್ಠಾನದ ಎಲ್ಲಾ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಸಂಸ್ಥೆಗೆ ವರ್ಗಾವಣೆಯಾಗತಕ್ಕದ್ದು ಮತ್ತು ಸಂಸ್ಥೆಯ ಹಕ್ಕುಗಳು ಮತ್ತು ಹೊಣೆಗಾರಿಕೆಗಳಾಗಿರತಕ್ಕದ್ದು; ಮತ್ತು

(ಸಿ) ಈ ಅಧಿನಿಯಮವನ್ನು ಮಾಡಲಾಗದಿದ್ದಲ್ಲಿ, ಪ್ರತಿಷ್ಠಾನವು ನಿಯೋಜಿಸಿದ ಪ್ರತಿಯೊಬ್ಬ ವ್ಯಕ್ತಿಯು ಗೊತ್ತುಪಡಿಸಲಾದ ದಿನದ ನಿಕಟಪೂರ್ವದಲ್ಲಿ ಹೊಂದಿದ್ದ ಪದಾವಧಿಯನ್ನು, ಪರಿಶ್ರಮಧನವನ್ನು ಮತ್ತು ನಿಬಂಧನೆ ಮತ್ತು ಷರತ್ತುಗಳನ್ನು ಹಾಗೂ ಪಿಂಚಣಿ, ರಜೆ, ಉಪದಾನ, ಭವಿಷ್ಯ ನಿಧಿ ಮತ್ತು ತಾನು ಹೊಂದಿರುವಂಥವೇ ಇತರ ವಿಷಯಗಳೊಂದಿಗೆ ಸಂಸ್ಥೆಯಲ್ಲಿನ ಪದವನ್ನು ಮತ್ತು ಸೇವೆಯನ್ನು ಹೊಂದಿರತಕ್ಕದ್ದು ಮತ್ತು ಆತನ ನಿಯೋಜನೆಯು ವಜಾ ಆಗದ ಹೊರತು ಮತ್ತು ವಜಾ ಆಗುವವರೆಗೆ ಅಥವಾ ಅಂಥ ಅವಧಿ, ಪರಿಶ್ರಮ ಧನ, ನಿಬಂಧನೆ ಮತ್ತು ಷರತ್ತುಗಳನ್ನು ಸಂಸ್ಥೆಯು ಯುಕ್ತನಾಗಿ ಮಾರ್ಪಾಡುಗೊಳಿಸುವವರೆಗೆ ಹಾಗೆಯೇ ಮುಂದುವರೆಸತಕ್ಕದ್ದು:

ಪರಂತು, ಅಂಥ ಉದ್ಯೋಗಿಗೆ, ಹಾಗೆ ಮಾಡಿದ ಮಾರ್ಪಾಡು ಒಪ್ಪಿಗೆಯಾಗದಿದ್ದಲ್ಲಿ, ಆತನ ಉದ್ಯೋಗವನ್ನು, ಸಂಸ್ಥೆಯು ಉದ್ಯೋಗಿಯೊಂದಿಗಿನ ಕರಾರಿನ ನಿಬಂಧನೆಗಳಿಗನುಸಾರವಾಗಿ ಕೊನೆಗೊಳಿಸಬಹುದು ಅಥವಾ ಈ ಸಂಬಂಧದಲ್ಲಿ ಅದರಲ್ಲಿ ಯಾವುದೇ ಉಪಬಂಧವನ್ನು ಮಾಡದಿದ್ದಲ್ಲಿ, ಖಾಯಂ ಉದ್ಯೋಗಿಯ ಸಂದರ್ಭದಲ್ಲಿ ಮೂರು ತಿಂಗಳ ಪರಿಶ್ರಮ ಧನಕ್ಕೆ ಮತ್ತು ಇತರೆ ಉದ್ಯೋಗಿಯ ಸಂದರ್ಭದಲ್ಲಿ ಒಂದು ತಿಂಗಳ ಪರಿಶ್ರಮ ಧನಕ್ಕೆ ಸಮನಾದ ಪರಿಶ್ರಮ ಧನವನ್ನು ಸಂಸ್ಥೆಯು ಆತನಿಗೆ ಸಂದಾಯ ಮಾಡಿ ಉದ್ಯೋಗವನ್ನು ಕೊನೆಗೊಳಿಸಬಹುದು.

**7. ಸಂಸ್ಥೆಯ ಧ್ಯೇಯೋದ್ದೇಶಗಳು.–** ಸಂಸ್ಥೆಯು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಕೈಗೊಳ್ಳಬಹುದು:–

(i) ಪ್ರಜ್ಞಾವಂತ ಸಮಾಜದ ಸೃಜನೆಗಾಗಿ ಸಾಮಾಜಿಕವಾದ ಸುಸಂಬದ್ಧ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಸಂಶೋಧನೆ ಮತ್ತು ಬೋಧನೆಗಾಗಿ ಸುಭದ್ರ ನೆಲೆಗಟ್ಟನ್ನು ರೂಪಿಸುವುದು;

(ii) ವೈದ್ಯಕೀಯ ಪದವಿ, ಪ್ರಾಕೃತಿಕ ಮತ್ತು ಸಾಮಾಜಿಕ ವಿಜ್ಞಾನಗಳ ಪದವಿ, ಡಾಕ್ಟೊರೇಟ್ ಪದವಿಯ (doctoral) ಮತ್ತು ಪೋಸ್ಟ್ ಡಾಕ್ಟೊರಲ್ ಫೆಲೊಗಳಾಗಿರುವ ವಿಷಯಿಕ ಆರೋಗ್ಯ ವಿಜ್ಞಾನಗಳ ವಿದ್ಯಾರ್ಥಿಗಳ ಅಭ್ಯುದಯಕ್ಕಾಗಿ ಸಂಶೋಧನೆ ಮತ್ತು ಬೋಧನೆಯನ್ನು ಬೆಂಬಲಿಸುವುದು, ಉತ್ತೇಜಿಸುವುದು ಮತ್ತು ಕೈಗೆತ್ತಿಕೊಳ್ಳುವುದು;

(iii) ಅಂತರ್-ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನಗಳಲ್ಲಿ ಸಂಶೋಧನೆ ಮತ್ತು ಬೋಧನೆಗಳಿಗೆ ಸಮಗ್ರತಾ ಚೌಕಟ್ಟನ್ನು ಹೊಂದಿರುವುದು;

(iv) ಸಾರ್ವಜನಿಕ ಆಡಳಿತಗಳ ವಿವಿಧ ಆಯಾಮಗಳನ್ನು ವಿಶ್ಲೇಷಿಸಲು ಮತ್ತು ನಿರ್ಧರಿಸಲು ಸಂಪನ್ಮೂಲ ಕೇಂದ್ರ ಮತ್ತು ಸಂಶೋಧನಾ ತಂಡದ ಅಭಿವೃದ್ಧಿಗೆ ಸಾಂಪ್ರದಾಯಿಕ ಭಾರತೀಯ ಆರೋಗ್ಯ ವಿಜ್ಞಾನಗಳು, ಜೈವಿಕ ವೈದ್ಯಕೀಯ ವಿಜ್ಞಾನಗಳು ಮತ್ತು ಇತರ ಮೂಲ ಪ್ರಾಕೃತಿಕ ಮತ್ತು ಸಾಮಾಜಿಕ ವಿಜ್ಞಾನಗಳ ಮೇಲೆ ಹೆಚ್ಚಿನ ಗಮನ ನೀಡುವುದು;

(v) ವಾಣಿಜ್ಯೋದ್ಯಮ ಮತ್ತು ವಾಣಿಜ್ಯೋದ್ಯಮಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸಲು ಸುಭದ್ರ ನೆಲೆಗಟ್ಟನ್ನು ರೂಪಿಸುವುದು ಮತ್ತು ಈಗಷ್ಟೆ ರೂಪುತಳೆಯುತ್ತಿರುವ ಕಂಪನಿಗಳಿಗೆ ಕಾರ್ಯತಂತ್ರದ ಸಲಹೆಗಳನ್ನು ಒದಗಿಸುವುದೂ ಒಳಗೊಂಡಂತೆ ಪ್ರಕರಣದ ಅಧ್ಯಯನಗಳನ್ನು ಅಭಿವೃದ್ಧಿಪಡಿಸುವುದು.

(vi) ಅಂತರ್-ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನಗಳ ಅಧ್ಯಯನಕ್ಕೆ ಸಮರ್ಪಿತವಾದಂಥ ಸಂಶೋಧನಾ ಕೇಂದ್ರವನ್ನು ಸೃಜಿಸುವುದು.

(vii) ಉತ್ತಮ ಗುಣಮಟ್ಟದ ಇತರ ಯಾವುವೇ ವಿಶ್ವವಿದ್ಯಾಲಯಗಳೊಂದಿಗೆ ಸಹಭಾಗಿಗಳಾಗಿ ಸಂಸ್ಥೆಯ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(viii) ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆಯನ್ನು ಮತ್ತು ಹೊಸತನವನ್ನು ಬೆಳಕಿಗೆ ತರುವುದು;

(ix) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯಸಮ್ಮತೆಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅನ್ವೇಷಣಾ ಪದ್ಧತಿಯನ್ನು ಅಳವಡಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು, ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರೆಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(x) ತನ್ನ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ ಸಮಗ್ರತೆ ಮತ್ತು ಮಾನವ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಪ್ರೋತ್ಸಾಹಿಸುವುದು.

**8. ಸಂಸ್ಥೆಯ ಅಧಿಕಾರಗಳು.**– ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಸಂಸ್ಥೆಯು, ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಈ ಮುಂದಿನ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ :–

(ಎ) ಸಂಸ್ಥೆಯು ತಾನು ಸೂಕ್ತವೆಂದು ಭಾವಿಸಬಹುದಾದಂಥ ಸಾರ್ವಜನಿಕ ಆರೋಗ್ಯ, ಸಾಂಕ್ರಾಮಿಕ ರೋಗಗಳ ನಿರ್ವಹಣೆ, ಶಸ್ತ್ರಚಿಕಿತ್ಸೆ, ಜೈವಿಕ ವೈದ್ಯಕೀಯ ಇಂಜಿನಿಯರಿಂಗ್, ಜೈವಿಕ ಅಂಕಿ ಅಂಶಗಳು, ಸಮಾಜ ವಿಜ್ಞಾನ ಮತ್ತು ವೈದ್ಯಶಾಸ್ತ್ರದ ಇತಿಹಾಸ, ಜೈವಿಕ ಮಾಹಿತಿಗಳು, ವ್ಯವಸ್ಥಾಪನ ಅಧ್ಯಯನಗಳು ಮತ್ತು ಕಲೆ ಹಾಗೂ ಸಂಸ್ಕೃತಿಯನ್ನು ಒಳಗೊಂಡಂತೆ ಅಂತರ್-ವಿಷಯ ವೈದ್ಯಕೀಯ ಮತ್ತು ಆರೋಗ್ಯ ವಿಜ್ಞಾನಗಳ ಮೂಲಕ ಅಂಥ ಆಯಾಮಗಳಲ್ಲಿ ಸಂಶೋಧನೆ ಮಾಡಲು ಭವಿಷ್ಯೋದ್ದೇಶದ ಕಾರ್ಯಕ್ರಮಗಳನ್ನು ರೂಪಿಸಲು, ಮತ್ತು ಶಿಕ್ಷಣ ನೀಡಲು ಮತ್ತು ಸಂಸ್ಥೆಯ ಅಭಿವೃದ್ಧಿಗಾಗಿ ಶೈಕ್ಷಣಿಕ ಪರಿಷತ್ತು ಸೂಕ್ತವೆಂದು ಭಾವಿಸಬಹುದಾದ ಅಂಥ ಶಾಖೆಗಳಲ್ಲಿ ಕಲಿಕೆಯ ಮುಂದುವರಿಕೆ ಮತ್ತು ಜ್ಞಾನದ ಪ್ರಸಾರಕ್ಕಾಗಿ ಅವಕಾಶವನ್ನು ಕಲ್ಪಿಸುವುದು;

(ಬಿ) ಆರೋಗ್ಯ ವಿಜ್ಞಾನಗಳು ಮತ್ತು ಉನ್ನತ ಗುಣಮಟ್ಟದ ತಂತ್ರಜ್ಞಾನದಲ್ಲಿ ಶಿಕ್ಷಣದ ಹೊಸ ಮಾದರಿಗಳ ಪ್ರಾತ್ಯಕ್ಷಿಕೆಗೊಳಿಸುವ ಹಾಗೆ ಪದವಿ ಹಾಗೂ ಸ್ನಾತಕೋತ್ತರ ಆರೋಗ್ಯ ವಿಜ್ಞಾನಗಳ ಶಿಕ್ಷಣ, ಇದರ ಎಲ್ಲಾ ಶಾಖೆಗಳು ಮತ್ತು ತತ್ಸಂಬಂಧ ಭೌತ ಮತ್ತು ಜೀವ ವಿಜ್ಞಾನಗಳಲ್ಲಿನ ಬೋಧನೆಯ ನವೀನಾತ್ಮಕ ವಿಧಾನಗಳನ್ನು ಅಭಿವೃದ್ಧಿಪಡಿಸುವುದು;

(ಸಿ) ಪರೀಕ್ಷೆಗಳನ್ನು ನಡೆಸುವುದು ಮತ್ತು ಪದವಿಗಳು, ಡಿಪ್ಲೊಮೋಗಳು, ಪ್ರಮಾಣಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳು ಮತ್ತು ಬಿರುದುಗಳನ್ನು ನೀಡುವುದು;

(ಡಿ) ಗೌರವ ಪದವಿಗಳನ್ನು ಅಥವಾ ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(ಇ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದಂಥ ಶುಲ್ಕಗಳು ಮತ್ತು ಇತರ ಚಾರ್ಜುಗಳನ್ನು ನಿಗದಿಪಡಿಸುವುದು, ಕೋರುವುದು ಮತ್ತು ಸ್ವೀಕರಿಸುವುದು;

(ಎಫ್) ವಿದ್ಯಾರ್ಥಿಗಳ ವಾಸಕ್ಕೆ ಹಾಲ್‌ಗಳು ಮತ್ತು ವಸತಿ ನಿಲಯಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ವ್ಯವಸ್ಥೆಗೊಳಿಸುವುದು;

(ಜಿ) ಸಂಸ್ಥೆಯ ವಿದ್ಯಾರ್ಥಿಗಳ ನಿವಾಸದ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮಾಡುವುದು ಹಾಗೂ ಶಿಸ್ತನ್ನು ನಿಯಂತ್ರಿಸುವುದು ಮತ್ತು ಅವರ ಆರೋಗ್ಯ, ಯೋಗಕ್ಷೇಮ ಮತ್ತು ಸಾಂಸ್ಕೃತಿಕ ಮತ್ತು ಕಾರ್ಪೋರೇಟ್ ಜೀವನದ ಏಳಿಗೆಗಾಗಿ ಏರ್ಪಾಡುಗಳನ್ನು ಮಾಡುವುದು;

(ಹೆಚ್) ಶೈಕ್ಷಣಿಕ ಮತ್ತು ಇತರ ಹುದ್ದೆಗಳನ್ನು ಪ್ರಾರಂಭಿಸುವುದು ಮತ್ತು ಅದಕ್ಕೆ ನೇಮಕಾತಿಗಳನ್ನು ಮಾಡುವುದು;

(ಐ) ಪರಿನಿಯಮಗಳು ಮತ್ತು ವಿನಿಯಮಗಳನ್ನು ರೂಪಿಸುವುದು ಮತ್ತು ಅವುಗಳನ್ನು ವ್ಯತ್ಯಾಸಗೊಳಿಸುವುದು, ಮಾರ್ಪಾಡುಗೊಳಿಸುವುದು ಅಥವಾ ಹಿಂದಕ್ಕೆ ಪಡೆಯುವುದು;

(ಜೆ) ಸಂಸ್ಥೆಯ ಉದ್ದೇಶಗಳನ್ನು ಮುಂದುವರೆಸುವುದಕ್ಕೆ ಸಂಬಂಧಿಸಿದಂತೆ ಸಂಸ್ಥೆಯು ಅವಶ್ಯಕವೆಂದು ಭಾವಿಸಬಹುದಾದ ಅಂಥ ರೀತಿಯಲ್ಲಿ ಸಂಸ್ಥೆಗೆ ಸೇರಿದ ಅಥವಾ ಸಂಸ್ಥೆಯಲ್ಲಿ ನಿಹಿತವಾದ ಯಾವುದೇ ಸ್ವತ್ತಿನೊಂದಿಗೆ ವ್ಯವಹರಿಸುವುದು;

(ಕೆ) ದಾನಗಳು, ಅನುದಾನಗಳು, ವಂತಿಕೆಗಳು ಅಥವಾ ಉಪಕಾರಗಳನ್ನು ಸ್ವೀಕರಿಸುವುದು ಮತ್ತು ಉಯಿಲುದಾರರು, ವಂತಿಕೆದಾರರು ಅಥವಾ ವರ್ಗಾವಣೆದಾರರುಗಳಿಂದ ಅಥವಾ ಸಂದರ್ಭಾನುಸಾರ ಸಾಲದ ಮೇಲೆ ತೆಗೆದುಕೊಂಡ ಚರಾಸ್ತಿ ಅಥವಾ ಸ್ಥಿರಾಸ್ತಿಯ ಉಯಿಲು ಮತ್ತು ವರ್ಗಾವಣೆಗಳನ್ನು ಸ್ವೀಕರಿಸುವುದು;

(ಎಲ್) ಸಂಸ್ಥೆಗಳ ಸಾಮಾನ್ಯ ಉದ್ದೇಶಗಳಿಗೆ ಅನುಕೂಲವಾಗಬಹುದಾದಂಥ ರೀತಿಯಲ್ಲಿ ಶಿಕ್ಷಕರು ಮತ್ತು ವಿದ್ವಾಂಸರುಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಅಂಥ ಸಂಸ್ಥೆಗಳಿಗೆ ಸಂಪೂರ್ಣವಾಗಿ ಅಥವಾ ಭಾಗಶ:ವಾಗಿ ಅಂಥವೇ ಉದ್ದೇಶಗಳನ್ನು ಹೊಂದಿರುವ ಪ್ರಪಂಚದ ಯಾವುದೇ ಭಾಗದಲ್ಲಿನ ಶೈಕ್ಷಣಿಕ ಅಥವಾ ಇತರ ಸಂಸ್ಥೆಗಳೊಂದಿಗೆ ಸಹಕರಿಸುವುದು ಅಥವಾ ಸಹಯೋಗವನ್ನು ಹೊಂದಿರುವುದು;

(ಎಂ) ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಪ್ರಶಸ್ತಿಗಳು, ಬಹುಮಾನಗಳು ಮತ್ತು ಪಾರಿತೋಷಕಗಳನ್ನು ಪ್ರಾರಂಭಿಸುವುದು ಮತ್ತು ನೀಡುವುದು;

(ಎನ್) ಅಂತರ್–ವಿಷಯ ಆರೋಗ್ಯ ವಿಜ್ಞಾನಗಳ ವಿವಿಧ ಆಯಾಮಗಳಿಗೆ ಸಂಬಂಧಿಸಿದಂತೆ ಮಾನಕಗಳು, ವ್ಯವಸ್ಥೆಗಳು ಮತ್ತು ಮಾನದಂಡಗಳನ್ನು ಸ್ಥಾಪಿಸುವುದು;

(ಒ) ಸಂಸ್ಥೆಗೆ ಸಂಬಂಧಿಸಿದ ಅಧ್ಯಯನ ಕ್ಷೇತ್ರಗಳು ಅಥವಾ ಶಿಕ್ಷಣ ವಿಷಯಗಳಲ್ಲಿ ಸಮಾಲೋಚನೆ ನಡೆಸುವುದು;

(ಪಿ) ಸಂಸ್ಥೆಯ ಎಲ್ಲಾ ಅಥವಾ ಯಾವುವೇ ಉದ್ದೇಶಗಳನ್ನು ಸಾಧಿಸಲು ಅವಶ್ಯಕ, ಆನುಷಂಗಿಕ ಅಥವಾ ನೆರವಾಗಬಹುದಾದ ಅಂಥ ಎಲ್ಲ ಕಾರ್ಯಗಳನ್ನೂ ಮಾಡುವುದು;

**9. ಸಂಸ್ಥೆಯು ಎಲ್ಲಾ ವರ್ಗಗಳು, ಜಾತಿಗಳು, ಮತ ಮತ್ತು ಲಿಂಗಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** ಸಂಸ್ಥೆಯ ಪ್ರವೇಶಗಳು ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು. ಎಲ್ಲಾ ಪ್ರವೇಶಗಳನ್ನು ಅರ್ಹತಾ ಪರೀಕ್ಷೆಗಳಲ್ಲಿನ ಅರ್ಹತೆಯ ಆಧಾರದ ಮೇಲೆ ಮಾಡತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಎಲ್ಲಾ ಕೋರ್ಸುಗಳ ಪ್ರವೇಶದಲ್ಲಿ ಶೇಕಡಾ ನಲವತ್ತರಷ್ಟನ್ನು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ಮೀಸಲಿಡತಕ್ಕದ್ದು ಮತ್ತು ಪ್ರವೇಶಗಳನ್ನು ರಾಜ್ಯ ಸರ್ಕಾರವು ಅಥವಾ ಅದರ ಏಜೆನ್ಸಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಮಾಡತಕ್ಕದ್ದು ಮತ್ತು ಸೀಟುಗಳನ್ನು ಅರ್ಹತೆ ಮತ್ತು ರಾಜ್ಯ ಸರ್ಕಾರವು ಕಾಲಕಾಲಕ್ಕೆ ರೂಪಿಸುವ ಮೀಸಲಾತಿ ನೀತಿಗೆ ಅನುಸಾರವಾಗಿ ಹಂಚಿಕೆ ಮಾಡತಕ್ಕದ್ದು:

ಮತ್ತು ಪರಂತು, ಯಾವುದೇ ಕೋರ್ಸಿನಲ್ಲಿ ಹತ್ತಕ್ಕಿಂತ ಕಡಿಮೆ ಸೀಟುಗಳು ಇರುವಲ್ಲಿ, ಸ್ನಾತಕೋತ್ತರ ಇಂಥ ಕೋರ್ಸುಗಳನ್ನು ಒಟ್ಟಿಗೆ ಒಂದುಗೂಡಿಸುವ ಮೂಲಕ ಮೀಸಲಿಡತಕ್ಕದ್ದು ಮತ್ತು ಯಾವುದೇ ಕೋರ್ಸಿನಲ್ಲಿ ಮೂರು ಸೀಟುಗಳಿಗಿಂತ ಕಡಿಮೆ ಇರುವಲ್ಲಿ, ಅವುಗಳನ್ನು ಸರದಿ ಸುತ್ತಿನಲ್ಲಿ ಮೀಸಲಿಡತಕ್ಕದ್ದು.

**10. ಸಂಸ್ಥೆಯಲ್ಲಿ ಬೋಧನೆ.–** ಸಂಸ್ಥೆಯು ಸಂಬಂಧಪಟ್ಟ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು. ಸಂಸ್ಥೆಯಲ್ಲಿನ ಭೋಧನೆಯನ್ನು, ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟ ಮತ್ತು ಪಠ್ಯಕ್ರಮಗಳಿಗನುಸಾರವಾಗಿ ಹಾಗೂ ಭೋಧನೆ ಮತ್ತು ಮೌಲ್ಯಮಾಪನ ವಿಧಾನಗಳು ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಮಾದರಿಗಳಿಗನುಸಾರವಾಗಿ ಸಂಸ್ಥೆಯ ಮೂಲಕ ಅಥವಾ ಅದರ ಹೆಸರಿನಲ್ಲಿ ನಡೆಸತಕ್ಕದ್ದು.

**11. ಅನುದಾನಗಳು ಮತ್ತು ಹಣಕಾಸು ನೆರವು.–** ಸಂಸ್ಥೆಯು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ನಿಕಾಯ ಅಥವಾ ನಿಗಮದಿಂದ ಯಾವುದೇ ನಿರ್ವಹಣೆ, ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗಾಗಿ; ಅಥವಾ

(ಬಿ) ಸರ್ಕಾರದಿಂದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳ ಪ್ರಯೋಜನಕ್ಕಾಗಿ,

–ಅನುದಾನದ ಮೂಲಕ ಅಥವಾ ಅನ್ಯಥಾ ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ಸಂಸ್ಥೆಯು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**12. ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಅಧಿಕಾರ.–** ಸಂಸ್ಥೆಯು, ಈ ಮುಂದಿನವುಗಳಿಗಾಗಿ ವಿದ್ಯಾಲಯಗಳನ್ನು ಸ್ಥಾಪಿಸಬಹುದು:–

(i) ಅಂತರ್–ವಿಷಯ ಆರೋಗ್ಯ ವಿಜ್ಞಾನಗಳು

(ii) ಅಂತರ್–ವಿಷಯ ಅಧ್ಯಯನಗಳು

(iii) ಶೈಕ್ಷಣಿಕ ಅನ್ವೇಷಣೆ ಮತ್ತು ಕಾರ್ಯತಂತ್ರದ ಪ್ರಭಾವ

(iv) ನೈಸರ್ಗಿಕ ವೈದ್ಯಕೀಯ ಸಂಪನ್ಮೂಲಗಳ ಸಂರಕ್ಷಣೆ

(v) ಜೈವಿಕ–ವೈದ್ಯಕೀಯ ಇಂಜಿನಿಯರಿಂಗ್

(vi) ಸಮಾಜ ವಿಜ್ಞಾನಗಳು, ಮಾನವೀಯತೆಯ ಮತ್ತು ವ್ಯವಸ್ಥಾಪನಾ ಅಧ್ಯಯನಗಳು

(vii) ಶೈಕ್ಷಣಿಕ ಪರಿಷತ್ತು ಮತ್ತು ವ್ಯವಸ್ಥಾಪನಾ ಮಂಡಳಿಯ ಶಿಫಾರಸ್ಸುಗಳ ಮೇಲೆ ಮತ್ತು ರಾಜ್ಯ ಸರ್ಕಾರ ಮತ್ತು ಸಂಬಂಧಪಟ್ಟ ರಾಷ್ಟ್ರೀಯ ಅಧಿಮಾನ್ಯತ ಸಂಸ್ಥೆಗಳ ಅನುಮೋದನೆಯೊಂದಿಗೆ ಯಾವುದೇ ಇತರ ಜ್ಞಾನದ ಕ್ಷೇತ್ರಗಳು.

(viii) ವಿದ್ಯಾಲಯಗಳಿಗೆ ಡೀನರು ಮುಖ್ಯಸ್ಥರಾಗಿರತಕ್ಕದ್ದು.

(ix) ಸಂಸ್ಥೆಯು ವಿದ್ಯಾಲಯಗಳ ಅಡಿಯಲ್ಲಿ ನಿರ್ದಿಷ್ಟ ದೃಷ್ಟಿಕೋನಗಳೊಂದಿಗೆ (specific foci ) ಕೇಂದ್ರಗಳನ್ನು ಸಹ ಸ್ಥಾಪಿಸಬಹುದು.

**13. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ಸಂಸ್ಥೆಗೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು;

(ii) ಸಂಸ್ಥೆಯ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ವ್ಯವಸ್ಥಾಪನಾ ಮಂಡಳಿಯ ಸದಸ್ಯರಾಗಿ ನಾಲ್ವರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು, ಇವರಲ್ಲಿ ಪ್ರತಿಯೊಬ್ಬರೂ ತಜ್ಞ ವೃತ್ತಿಪರರೂ ಅಥವಾ ಸಂಶೋಧಕರಾಗಿರತಕ್ಕದ್ದು;

(iv) ಸಂಸ್ಥೆಯ ದತ್ತಿನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(v) ಸಂಸ್ಥೆಯಿಂದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವ ಬಗ್ಗೆ ಕಾರ್ಯನೀತಿಗಳನ್ನು ನಿರ್ಧರಿಸುವುದು;

(vi) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ– III
## ಸಂಸ್ಥೆಯ ಅಧಿಕಾರಿಗಳು

**14. ಸಂಸ್ಥೆಯ ಅಧಿಕಾರಿಗಳು.–** ಈ ಮುಂದಿನವರು ಸಂಸ್ಥೆಯ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಅಧ್ಯಕ್ಷರು;

(iii) ನಿರ್ದೇಶಕರು;

(iv) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು;

(v) ಡೀನ್‌ಗಳು;

(vi) ಹಣಕಾಸು ಅಧಿಕಾರಿ; ಮತ್ತು

(vii) ಸಂಸ್ಥೆಯ ಅಧಿಕಾರಿಗಳೆಂದು ವ್ಯವಸ್ಥಾಪನಾ ಮಂಡಳಿಯು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**15. ಸಂದರ್ಶಕರು.–** (1) ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು ಮತ್ತು ಸಂದರ್ಶಕರು ಸಂಸ್ಥೆಯ ಕಾರ್ಯನಿರ್ವಹಣೆಯ ಸುಧಾರಣೆಗಾಗಿ ಸಲಹೆಗಳನ್ನು ನೀಡಬಹುದು.

(2) ಸಂದರ್ಶಕರು, ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ಸಂಸ್ಥೆಯ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಂದರ್ಶಕರು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಸಂಸ್ಥೆಯ ವ್ಯವಹಾರಗಳಿಗೆ ಸಂಬಂಧಿಸಿದ ಯಾವುದೇ ಕಾಗದ ಪತ್ರ ಅಥವಾ ಮಾಹಿತಿಯನ್ನು ಕೇಳುವುದು;

(ii) ಸಂದರ್ಶಕರು ಸ್ವೀಕರಿಸಿದ ಮಾಹಿತಿಯ ಆಧಾರದ ಮೇಲೆ ಮತ್ತು ಸಂಸ್ಥೆಯ ಯಾವುದೇ ಪ್ರಾಧಿಕಾರವು ಮಾಡಿದ ಯಾವುದೇ ಆದೇಶ, ನಡವಳಿಗಳು ಅಥವಾ ಕೈಗೊಂಡ ತೀರ್ಮಾನವು ಅಧಿನಿಯಮ, ವಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿಲ್ಲವೆಂದು ಅವರು ಮನಗಂಡರೆ, ಸಂಸ್ಥೆಯ ಹಿತದೃಷ್ಟಿಯಿಂದ ತಾವು ಸೂಕ್ತವೆಂದು ಭಾವಿಸಬಹುದಾದ ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ಹಾಗೆ ನೀಡಲಾದ ನಿರ್ದೇಶನಗಳನ್ನು ಸಂಬಂಧಪಟ್ಟ ಎಲ್ಲರೂ ಪಾಲಿಸತಕ್ಕದ್ದು.

**16. ಅಧ್ಯಕ್ಷರು.–** (1) ಅಧ್ಯಕ್ಷರನ್ನು, ಈ ಮುಂದಿನ ಅಧಿಕಾರಗಳೊಂದಿಗೆ, ಐದು ವರ್ಷಗಳ ಅವಧಿಗೆ ಪ್ರಾಯೋಜಕ ಸಂಸ್ಥೆಯು ನೇಮಿಸತಕ್ಕದ್ದು.

(2) ಪ್ರಾಯೋಜಕ ಸಂಸ್ಥೆಯ ಸಂಸ್ಥಾಪಕ ನ್ಯಾಸಧಾರಿಯು ಮೊದಲ ಅಧ್ಯಕ್ಷರಾಗಿತಕ್ಕದ್ದು ಮತ್ತು ಆತನು ಆಜೀವಪರ್ಯಂತ ಅಥವಾ ಆತನು ಪದವನ್ನು ಬಿಟ್ಟುಬಿಡುವವರೆಗೂ ಪದವನ್ನು ಹೊಂದಿರತಕ್ಕದ್ದು.

(3) ಅಧ್ಯಕ್ಷರು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿತವಾದ ಪರಿನಿಯಮಗಳ ಮೂಲಕ ಆತನಿಗೆ ಪ್ರದತ್ತವಾದ ಅಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು, ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿಯ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು;

(ii) ಸಂದರ್ಶಕರ ಗೈರುಹಾಜರಿಯಲ್ಲಿ ಸಂಸ್ಥೆಯ ಎಲ್ಲಾ ಘಟಿಕೋತ್ಸವಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವುದು;

(iii) ಸಂಸ್ಥೆಯ ಪ್ರಬಂಧಕ ಮಂಡಳಿಯ ಸದಸ್ಯ ಮತ್ತು ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದು ಅಲ್ಲದೆ ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಹಾಜರಾಗುವುದು;

(iv) ಈ ಅಧಿನಿಯಮ ಮತ್ತು ಪರಿನಿಯಮ ಮತ್ತು ವಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ನಿರ್ದೇಶಕರನ್ನು ನೇಮಿಸುವುದು ಅಥವಾ ಪುನರ್ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(v) ಪ್ರಬಂಧಕ ಮಂಡಳಿಯ ಸದಸ್ಯರಾಗಿ ತಜ್ಞರಾದ/ವಿಜ್ಞಾನಿಗಳಾದ/ವೃತ್ತಿಪರರಾದಂಥ ಮೂವರು ತಜ್ಞ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡತಕ್ಕದ್ದು;

(vi) ಮೊದಲ ವ್ಯವಸ್ಥಾಪನಾ ಮಂಡಳಿಯ, ಹಣಕಾಸು ಸಮಿತಿಯ, ಸಂಶೋಧನಾ ಪರಿಷತ್ತಿನ ಮತ್ತು ಶೈಕ್ಷಣಿಕ ಪರಿಷತ್ತಿನ ರಚನೆಯನ್ನು ಅನುಮೋದಿಸುವುದು;

(vii) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ ವಿವಾದಗಳನ್ನು (ಪ್ರಬಂಧಕ ಮಂಡಳಿಯ ಸಭೆಗಳಲ್ಲಿನ ವಿವಾದಗಳನ್ನು ಹೊರತುಪಡಿಸಿ)ಪರಿಹರಿಸುವುದು;

(viii) ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆ ಅಥವಾ ಸಂಸ್ಥೆಗಳು ಮತ್ತು ಸಂಸ್ಥೆಯ ಯಾವುದೇ ಇತರ ಪದಾಧಿಕಾರಿ ಅಥವಾ ಸಂಸ್ಥೆಗಳ ನಡುವೆ ವಿವಾದಗಳು ಉಂಟಾದಲ್ಲಿ, ಆ ವಿವಾದವನ್ನು ಅಧ್ಯಕ್ಷರ ಪರ್ಯಾಲೋಚನೆಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿವಾದದ ಸಂದರ್ಭದಲ್ಲಿ ಅಧ್ಯಕ್ಷರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ಸಂಸ್ಥೆಯು ಬದ್ಧವಾಗಿರತಕ್ಕದ್ದು.

**17. ನಿರ್ದೇಶಕರು.–** (1) ನಿರ್ದೇಶಕರನ್ನು ಮಂಡಳಿಯು ನಿರ್ಧರಿಸಿದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಪ್ರಬಂಧಕ ಮಂಡಳಿಯು ನೇಮಕ ಮಾಡಿದ ಶಿಕ್ಷಣ ತಜ್ಞರು, ತಜ್ಞರು (knowledge experts), ವೃತ್ತಿಪರರನ್ನು ಒಳಗೊಂಡ ಶೋಧನಾ ಸಮಿತಿಯ ಮೂವರು ಸದಸ್ಯರ ಶಿಫಾರಸ್ಸನ್ನು ಆಧರಿಸಿ ಅಧ್ಯಕ್ಷರು ನೇಮಕಮಾಡತಕ್ಕದ್ದು.

(2) ನಿರ್ದೇಶಕರು ಸಂಸ್ಥೆಯ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಸಂಸ್ಥೆಯ ವ್ಯವಹಾರಗಳ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸತಕ್ಕದ್ದು ಹಾಗೂ ಸಂಸ್ಥೆಯ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು.

(3) ನಿರ್ದೇಶಕರು, ಸಂಸ್ಥೆಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರನ್ನು ನಾಮ ನಿರ್ದೇಶನ ಮಾಡತಕ್ಕದ್ದು ಮತ್ತು ನೇಮಕ ಮಾಡತಕ್ಕದ್ದು. ನಿರ್ದೇಶಕರು, ಈ ಉದ್ದೇಶಕ್ಕಾಗಿ ನಿರ್ದೇಶಕರಿಂದ ನೇಮಕವಾದ ಸಮಿತಿಗಳು ಸ್ವೀಕರಿಸಿದ ಶಿಫಾರಸ್ಸುಗಳ ಆಧಾರದ ಮೇಲೆ ಸಂಸ್ಥೆಯ ಎಲ್ಲಾ ಡೀನರುಗಳು ಮತ್ತು ಹಿರಿಯ ಅಧ್ಯಾಪಕ ವರ್ಗ (ಫ್ಯಾಕಲ್ಟಿಗಳ) ನೇಮಕಾತಿಗಳ ಅನುಮೋದನೆಗೆ ಹೊಣೆಗಾರರಾಗಿರುತ್ತಾರೆ. ನಿರ್ದೇಶಕರು ಪರಿನಿಯಮಗಳು ಮತ್ತು ವಿನಿಯಮಗಳು ವಿಧಿಸಬಹುದಾದ ಅಂಥ ಇತರ ಅಧಿಕಾರಿಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ನಿರ್ದೇಶಕರ ಸೇವೆಗಳನ್ನು, ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ ಮತ್ತು ಸ್ವಾಭಾವಿಕ ನ್ಯಾಯದ ತತ್ವಗಳನ್ನು ಅನುಸರಿಸಿದ ನಂತರ ಹಾಗೂ ಶಿಸ್ತುಕ್ರಮಗಳ ಆಧಾರದ ಮೇಲೆ ಮುಕ್ತಾಯಗೊಳಿಸುವಿಕೆಯನ್ನೂ ಒಳಗೊಂಡಂತೆ ಆತನ ಪ್ರಕರಣವನ್ನು ಮಂಡಿಸುವುದಕ್ಕೆ ಅವಕಾಶವನ್ನು ನೀಡಿದ ತರುವಾಯ, ಅಧ್ಯಕ್ಷರು ಮುಕ್ತಾಯಗೊಳಿಸಬಹುದು. ಅಧ್ಯಕ್ಷರು ಮತ್ತು ಸಂದರ್ಶಕರ ಗೈರು ಹಾಜರಿಯಲ್ಲಿ ಸಂಸ್ಥೆಯ ಘಟಿಕೋತ್ಸವದ ಅಧ್ಯಕ್ಷತೆಯನ್ನು ನಿರ್ದೇಶಕರು ವಹಿಸತಕ್ಕದ್ದು.

**18. ವಿದ್ಯಾಲಯಗಳ ಡೀನ್‌ಗಳು.–** ಸಂಸ್ಥೆಯಲ್ಲಿಯ ವಿದ್ಯಾಲಯಗಳ ಡೀನ್‌ಗಳನ್ನು ನಿರ್ದೇಶಕರು ನೇಮಕಮಾಡತಕ್ಕದ್ದು ಮತ್ತು ಅವರು ಪರಿನಿಯಮಗಳು ಮತ್ತು ವಿನಿಯಮಗಳಲ್ಲಿ ಹೇಳಲಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**19. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು (COO&R).**– (1) ನಿರ್ದೇಶಕರು, ಪರಿನಿಯಮಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವ (COO&R)ರನ್ನು ನಾಮ ನಿರ್ದೇಶನ ಮಾಡತಕ್ಕದ್ದು ಮತ್ತು ನೇಮಕ ಮಾಡತಕ್ಕದ್ದು.

(2) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಐಟಿ, ಆರ್‌ಓಸಿ ಮುಂತಾದಂಥ ಎಲ್ಲಾ ಸರ್ಕಾರಿ ಸಂಸ್ಥೆಗಳೊಂದಿಗೆ ದೈನಂದಿನ ಹಣಕಾಸು ಆಡಳಿತ, ಮಾನವ ಸಂಪನ್ಮೂಲಗಳ ನಿರ್ವಹಣೆ, ಶಾಸನ ಪಾಲನಾ ಅವಶ್ಯಕತೆಗಳನ್ನು ಪೂರೈಸುವುದಕ್ಕೆ ಹೊಣೆಗಾರರಾಗಿರತಕ್ಕದ್ದು ಮತ್ತು ಶೈಕ್ಷಣಿಕ ಘಟಕಗಳಲ್ಲಿ ಕುಲಸಚಿವರ ಪಾತ್ರವನ್ನು ನಿರ್ವಹಿಸತಕ್ಕದ್ದು.

(3) ಎಲ್ಲಾ ಕರಾರುಗಳನ್ನು ಸಂಸ್ಥೆಯ ಪರವಾಗಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಮಾಡಿಕೊಳ್ಳತಕ್ಕದ್ದು ಮತ್ತು ಅದಕ್ಕೆ ಸಹಿ ಹಾಕತಕ್ಕದ್ದು.

(4) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಸಂಸ್ಥೆಯ ಪರವಾಗಿ ದಾಖಲೆಗಳನ್ನು ಅಧಿಕೃತಗೊಳಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಹಾಗೂ ಪರಿನಿಯಮಗಳು ಮತ್ತು ವಿನಿಯಮಗಳ ಮೂಲಕ ಹೇಳಬಹುದಾದಂಥ ಅಥವಾ ಅಧ್ಯಕ್ಷರು ಮತ್ತು ಸಿ.ಇ.ಓ ಇವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(5) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಸಂಸ್ಥೆಯ ದಾಖಲೆಗಳು ಮತ್ತು ಸಾಮಾನ್ಯ ಮೊಹರಿನ ಯುಕ್ತ ಅಭಿರಕ್ಷೆಯ ಹೊಣೆಗಾರಿಕೆಯನ್ನು ಹೊಂದಿರತಕ್ಕದ್ದು ಮತ್ತು ಅಧ್ಯಕ್ಷರು, ನಿರ್ದೇಶಕರು ಅಥವಾ ಇತರ ಯಾವುದೇ ಪ್ರಾಧಿಕಾರವು ಕೋರಿದಂಥ ಎಲ್ಲಾ ಅಂಥ ಮಾಹಿತಿಯನ್ನು ಮತ್ತು ದಾಖಲೆಗಳನ್ನು ಅವರ ಮುಂದೆ ಮಂಡಿಸಲು ಬದ್ಧರಾಗಿತಕ್ಕದ್ದು.

(6) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಎಲ್ಲಾ ಕಾನೂನು ವ್ಯವಹರಣೆಗಳಲ್ಲಿ ಸಂಸ್ಥೆಯನ್ನು ಪ್ರತಿನಿಧಿಸತಕ್ಕದ್ದು.

**20. ಹಣಕಾಸು ಅಧಿಕಾರಿ.–** ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಹಣಕಾಸು ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವರು ಪರಿನಿಯಮಗಳು ಮತ್ತು ವಿನಿಯಮಗಳಲ್ಲಿ ಹೇಳಲಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**21. ಇತರ ಅಧಿಕಾರಿಗಳು.–** ಸಂಸ್ಥೆಯ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಕರ್ತವ್ಯಗಳು, ನಿಯಮಗಳು ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ಸಂಸ್ಥೆಯ ಪ್ರಾಧಿಕಾರಗಳು

**22. ಸಂಸ್ಥೆಯ ಪ್ರಾಧಿಕಾರಗಳು.–** ಈ ಮುಂದಿನವುಗಳು ಸಂಸ್ಥೆಯ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ವ್ಯವಸ್ಥಾಪನಾ ಮಂಡಳಿ;

(iii) ಶೈಕ್ಷಣಿಕ ಪರಿಷತ್ತು;

(iv) ಸಂಶೋಧನಾ ಪರಿಷತ್ತು;

(v) ಹಣಕಾಸು ಸಮಿತಿ; ಮತ್ತು

(vi) ಸಂಸ್ಥೆಯ ಪ್ರಾಧಿಕಾರಗಳೆಂದು ವ್ಯವಸ್ಥಾಪನಾ ಮಂಡಳಿಯು ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**23. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಅಧ್ಯಕ್ಷರು

(ii) ನಿರ್ದೇಶಕರು

(iii) ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ;

(iv) ನಿರ್ದೇಶಕರೊಂದಿಗೆ ಸಮಾಲೋಚಿಸಿ ಅಧ್ಯಕ್ಷರು ನಾಮನಿರ್ದೇಶಿಸಿದಂಥ ಮೂವರು ತಜ್ಞರು/ವಿಜ್ಞಾನಿಗಳು/ವೃತ್ತಿಪರರು.

(v) ಮೂವರು ತಜ್ಞ ವ್ಯಕ್ತಿಗಳು ಇವರಲ್ಲಿ ಪ್ರತಿಯೊಬ್ಬರನ್ನು ಪ್ರಾಯೋಗಿಕ ಮಂಡಳಿಯು ನಾಮನಿರ್ದೇಶನ ಮಾಡಬಹುದು.

(vi) ವಿಶ್ವವಿದ್ಯಾಲಯ ಅನುದಾನ ಆಯೋಗವು ನಾಮನಿರ್ದೇಶಿಸಿದ ಒಬ್ಬ ಶಿಕ್ಷಣ ತಜ್ಞ.

(2) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಹಾಗೂ ಡೀನರು ಪ್ರಬಂಧಕ ಮಂಡಳಿಯ ಮತದಾನದ ಹಕ್ಕನ್ನು ಹೊಂದಿಲ್ಲದ ಆಹ್ವಾನಿತರಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಪರಿನಿಯಮಗಳಲ್ಲಿ ಹೇಳಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಸಭೆಗಳಲ್ಲಿ ಅಧ್ಯಕ್ಷರು ಅಧ್ಯಕ್ಷತೆವಹಿಸತಕ್ಕದ್ದು ಹಾಗೂ ಅವರ ಗೈರು ಹಾಜರಿಯಲ್ಲಿ ಪ್ರಾಯೋಜಿಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಿಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೆ ಇದ್ದಲ್ಲಿ ನಿರ್ದೇಶಕರು ಅಧ್ಯಕ್ಷತೆ ವಹಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ಮಾಡುವ ಐದು ಜನ ಸದಸ್ಯರು ಕೋರಂ ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಅಧ್ಯಕ್ಷರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಅಧ್ಯಕ್ಷರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ನಿರ್ದೇಶಕರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಕಾರ್ಯಸೂಚಿ ವಿಷಯದ ಪರವಾಗಿ ಅಧ್ಯಕ್ಷರು ಸಕಾರಾತ್ಮಕ ಮತವನ್ನು ನೀಡದ ಹೊರತು, ಯಾವುದೇ ಕಾರ್ಯಸೂಚಿ ವಿಷಯಗಳ ಸಂಬಂಧದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿ ಅವರು ಯಾವುದೇ ಗೊತ್ತುವಳಿಯನ್ನು ಅಂಗೀಕರಿಸತಕ್ಕದ್ದಲ್ಲ ಅಥವಾ ತೀರ್ಮಾನವನ್ನು ಕೈಗೊಳ್ಳತಕ್ಕದ್ದಲ್ಲ.

(7) ಪ್ರಬಂಧಕ ಮಂಡಳಿಯ ಸಭೆಯಲ್ಲಿ ವಿವಾದ ಉಂಟಾದ ಸಂದರ್ಭದಲ್ಲಿ, ಸದರಿ ವಿಷಯವನ್ನು ಪ್ರಾಯೋಜಕ ಮಂಡಳಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಸಂಬಂಧದಲ್ಲಿ ಪ್ರಾಯೋಜಕ ಮಂಡಳಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ಸಂಸ್ಥೆಯು ಬದ್ಧವಾಗಿರತಕ್ಕದ್ದು.

(8) ಪ್ರಬಂಧಕ ಮಂಡಳಿಯು ಸಂಸ್ಥೆಯ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಸಂಸ್ಥೆಯ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ಸಂಸ್ಥೆಯು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ನಿಯಮಗಳ ಮತ್ತು ವಿನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ಸಂಸ್ಥೆಯ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ಸಂಸ್ಥೆಯ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಪರಿನಿಯಮಗಳನ್ನು ತಿದ್ದುಪಡಿ ಮಾಡುವುದು, ಮಾರ್ಪಾಡು ಮಾಡುವುದು ಅಥವಾ ನಿರಸನಗೊಳಿಸುವುದು;

(vi) ಸಂಸ್ಥೆಯನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ಸಂಸ್ಥೆಯ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(ix) ಪ್ರತಿಷ್ಠಾನದ ಉದ್ದೇಶವನ್ನು ಮೇಲ್ದರ್ಜೆಗೇರಿಸಲು ಹೊಸ ಅಸ್ತಿತ್ವಗಳನ್ನು ವ್ಯವಸ್ಥೆಗೊಳಿಸಲು ಇತರ ನಿಕಾಯಗಳು ಮತ್ತು ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು ಮತ್ತು ಭಾಗವಹಿಸುವುದು.

(9) ಪ್ರಬಂಧಕ ಮಂಡಳಿಯು ಒಂದು ವರ್ಷದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು.

**24. ವ್ಯವಸ್ಥಾಪನಾ ಮಂಡಳಿ.–** (1) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ನಿರ್ದೇಶಕರು;

(ii) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು;

(iii) ಪ್ರಾಯೋಜಕ ಸಂಸ್ಥೆಯ ಗರಿಷ್ಠ ನಾಲ್ಕು ಜನ ನಾಮನಿರ್ದೇಶಿತರು, ಇವರಲ್ಲಿ ಪ್ರತಿಯೊಬ್ಬರು ತಜ್ಞ ವೃತ್ತಿಪರರು ಅಥವಾ ಸಂಶೋಧಕರಾಗಿರತಕ್ಕದ್ದು;

(iv) ವಿದ್ಯಾಲಯಗಳ ಎಲ್ಲಾ ಡೀನ್‌ಗಳು.

(2) ನಿರ್ದೇಶಕರು ವ್ಯವಸ್ಥಾಪನಾ ಸಂಸ್ಥೆಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ವ್ಯವಸ್ಥಾಪನಾ ಮಂಡಳಿಯ ಕಾರ್ಯದರ್ಶಿ ಯಾಗಿರತಕ್ಕದ್ದು.

(3) ವ್ಯವಸ್ಥಾಪನಾ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಪರಿನಿಯಮಗಳನ್ನು ರೂಪಿಸುವುದು ಮತ್ತು ಅವುಗಳ ಅನುಷ್ಠಾನವನ್ನು ಮೇಲ್ವಿಚಾರಣೆ ಮಾಡತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯ ಎಲ್ಲಾ ಸಭೆಗಳಲ್ಲಿ ಯಾವಾಗಲೂ ನಿರ್ದೇಶಕರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ನಿರ್ದೇಶಕರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಇತರ ಯಾವೊಬ್ಬ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ವಿವಾದ ಉಂಟಾದ ಸಂದರ್ಭದಲ್ಲಿ ಸದರಿ ವಿಷಯವನ್ನು ಅಧ್ಯಕ್ಷರಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಸಂಬಂಧದಲ್ಲಿ ಅಧ್ಯಕ್ಷರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ಸಂಸ್ಥೆಯು ಬದ್ಧವಾಗಿರತಕ್ಕದ್ದು.

**25. ಶೈಕ್ಷಣಿಕ ಪರಿಷತ್ತು.–**(1) ಶೈಕ್ಷಣಿಕ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ನಿರ್ದೇಶಕರು – ಅಧ್ಯಕ್ಷರು

(ii) ಡೀನ್‌ಗಳು – ಸದಸ್ಯರು

(iii) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು – ಕಾರ್ಯದರ್ಶಿಗಳು

(iv) ವ್ಯವಸ್ಥಾಪನಾ ಮಂಡಳಿಯು ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಶೈಕ್ಷಣಿಕ ಪರಿಷತ್ತು ಸಂಸ್ಥೆಯ ಪ್ರಧಾನ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಸಂಸ್ಥೆಯ ಶೈಕ್ಷಣಿಕ ಕಾರ್ಯನೀತಿಗಳ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**26. ಸಂಶೋಧನಾ ಪರಿಷತ್ತು.–** (1) ಸಂಶೋಧನಾ ಪರಿಷತ್ತು ಸಂಸ್ಥೆಯ ಪ್ರಧಾನ ಸಂಶೋಧನಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳ ಆದ್ಯತೆಯೂ ಒಳಗೊಂಡಂತೆ, ಸಂಸ್ಥೆಯು ಕೈಗೊಳ್ಳಬೇಕಾದ ಸಂಶೋಧನೆಯ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಸಂಶೋಧನಾ ಪರಿಷತ್ತು, ಸಂಸ್ಥೆಯ ಸಂಶೋಧನಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ನಿರ್ದೇಶಕರು – ಅಧ್ಯಕ್ಷರು

(ii) ಡೀನ್‌ಗಳು – ಸದಸ್ಯರು

(iii) ವ್ಯವಸ್ಥಾಪನಾ ಮಂಡಳಿಯು ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಅಧ್ಯಕ್ಷರು ಅಥವಾ ಅವರ ನಾಮನಿರ್ದೇಶಕರು – ಅಧ್ಯಕ್ಷರು

(ii) ನಿರ್ದೇಶಕರು – ಸದಸ್ಯರು

(iii) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು – ಸದಸ್ಯರು

(iv) ಡೀನ್‌ಗಳು – ಸದಸ್ಯರು

(v) ಹಣಕಾಸು ಅಧಿಕಾರಿ – ಕಾರ್ಯದರ್ಶಿ

(vi) ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು – ಸದಸ್ಯರು; ಮತ್ತು

(vii) ವ್ಯವಸ್ಥಾಪನಾ ಮಂಡಳಿಯು ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಸಂಸ್ಥೆಯ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಸಂಸ್ಥೆಯ ಹಣಕಾಸು ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ಸಂಸ್ಥೆಯ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಪ್ರಬಂಧಕ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಒಂದು ಪ್ರಾಧಿಕಾರದ ಅಥವಾ ಸಂಸ್ಥೆಯ ಸದಸ್ಯತ್ವಕ್ಕೆ ಅನರ್ಹತೆ.–** ಸಂಸ್ಥೆಯ ಯಾವುದೇ ಪ್ರಾಧಿಕಾರದ ಅಥವಾ ಸಂಸ್ಥೆಯ ಯಾವೊಬ್ಬ ವ್ಯಕ್ತಿಯು,–

(ಎ) ಅಸ್ವಸ್ಥ ಚಿತ್ತನಾಗಿದ್ದು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ;

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ;

(ಡಿ) ಖಾಸಗಿ ಬೋಧನಾ ತರಗತಿಗಳನ್ನು ಸ್ವತ: ನಡೆಸುತ್ತಿದ್ದರೆ ಅಥವಾ ನಿರತನಾಗಿದ್ದರೆ;

(ಇ) ಯಾವುದೇ ವಿಧದಲ್ಲಿ, ಎಲ್ಲಿಯೇ, ಯಾವುದೇ ಪರೀಕ್ಷೆಯನ್ನು ನಡೆಸುವಲ್ಲಿ ಅನುಚಿತ ಅಭ್ಯಾಸದಲ್ಲಿ ತೊಡಗಿದ್ದಕ್ಕಾಗಿ ಅಥವಾ ಉತ್ತೇಜಿಸಿದ್ದಕ್ಕಾಗಿ ದಂಡಿತನಾಗಿದ್ದರೆ;

(ಎಫ್) ಪ್ರಾಯೋಜಕ ಸಂಸ್ಥೆಯು ಯಾವುವೇ ಪ್ರಾಧಿಕಾರಗಳ ಅಥವಾ ಸಂಸ್ಥೆಗಳ ಯಾವೊಬ್ಬ ಸದಸ್ಯನನ್ನು ಆ ಪದವನ್ನು ಹೊಂದಿರುವುದಕ್ಕೆ ಅರ್ಹನಲ್ಲನೆಂದು ಲಿಖಿತದಲ್ಲಿ ಅಭಿಪ್ರಾಯ ನೀಡಿದಾಗಲೆಲ್ಲಾ,

–ಸದಸ್ಯನಾಗಿರುವುದಕ್ಕೆ ಅನರ್ಹನಾಗತಕ್ಕದ್ದು.

**30. ಖಾಲಿಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ಸಂಸ್ಥೆಯ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ.

**31. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಅಧ್ಯಕ್ಷರ ಲಿಖಿತ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ವ್ಯವಸ್ಥಾಪನಾ ಮಂಡಳಿಯ ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿಯಲ್ಲಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ಅಧ್ಯಕ್ಷರು ಸಂಸ್ಥೆಯ ಯಾವುದೇ ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆಯ ನಿಕಾಯ ಅಥವಾ ನಿಕಾಯಗಳು ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಎಲ್ಲಾ ಸಮಯದಲ್ಲಿ ಹೊಂದಿರತಕ್ಕದ್ದು ಮತ್ತು ಅಂಥ ಪರಿಹಾರ ಕ್ರಮದ ಪರಿಣಾಮವಾಗಿ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ಸಂಸ್ಥೆಯ ಪದಾಧಿಕಾರಿ ಅಥವಾ ಪದಾಧಿಕಾರಿಗಳು ಅಥವಾ ಸಂಸ್ಥೆಯ ನಿಕಾಯ ಅಥವಾ ನಿಕಾಯಗಳು ಕೈಗೊಂಡಿದ್ದ ಎಲ್ಲಾ ಅಂಥ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಪರಿನಿಯಮಗಳು ಮತ್ತು ವಿನಿಯಮಗಳು

**32. ಪರಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪರಿನಿಯಮಗಳು ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ ವ್ಯವಸ್ಥಾಪನಾ ಮಂಡಳಿಯು ನಿರ್ಧರಿಸಿದಂತೆ ಸಂಸ್ಥೆಗೆ ಮತ್ತು ಸಿಬ್ಬಂದಿಗೆ ಸಂಬಂಧಿಸಿದ ಯಾವುದೇ ವಿಷಯಕ್ಕೆ ಉಪಬಂಧವನ್ನು ಕಲ್ಪಿಸಬಹುದು. ಪರಿನಿಯಮಗಳು ಈ ಮುಂದಿನ ವಿಷಯಗಳಿಗೆ ಸಂಬಂಧಿಸಿರಬಹುದು, ಎಂದರೆ:–

(i) ಸಂಸ್ಥೆಯ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿರದ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಂಸ್ಥೆಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ನಿರ್ದೇಶಕರು, ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ಸಂಸ್ಥೆಯ ಇತರ ಅಧಿಕಾರಿಗಳ, ಅಧ್ಯಾಪಕರ ಮತ್ತು ನೌಕರರ ನೇಮಕಾತಿಯ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ಸಂಸ್ಥೆಯ ಹಾಗೂ ಅದರ ಅಧಿಕಾರಿಗಳು, ವ್ಯಾಸಂಗ ವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ಕಾರ್ಯವಿಧಾನ;

(vi) ವಿದ್ಯಾಲಯಗಳ ಮತ್ತು ಕೇಂದ್ರಗಳ ಸೃಜನೆ, ರದ್ದತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಕಲಿಕಾ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿಯ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳ, ಪದವಿಗಳ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–**(1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು, ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಪ್ರಾಧಿಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸುವ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು, ಮೊದಲ ಕುಲಸಚಿವರು ಮೌಲ್ಯಮಾಪನ ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಈ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನೂಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾವಾಗಿಯೇ ಹೆಚ್ಚಿಸಬಹುದಾಗಿದ್ದು ಆದರೆ ಅದಕ್ಕಿಂತ ಕಡಿಮೆ ಮಾಡತಕ್ಕದ್ದಲ್ಲ :

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ದೇಣಿಗೆಗಳು ಮತ್ತು ಕಾಲಕಾಲಕ್ಕೆ ಸ್ವೀಕರಿಸಲಾದ ಇತರ ನಿಧಿಯನ್ನು ಒಳಗೊಂಡ ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದ ಅಂಥ ನಿಧಿಯನ್ನು ಹೊಂದಿರುವ ಒಂದು ವಿಶ್ವವಿದ್ಯಾಲಯ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪನಗೊಳಿಸುವದನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೆ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಿಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:-

(i) ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.–** 47, 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟೆಡ್ ಅಕೌಂಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31 ರಂದು ಅಥವಾ ಅದಕ್ಕೆ ಮೊದಲು ಕಳುಹಿಸತಕ್ಕದ್ದು.

(5) ಲೆಕ್ಕಪರಿಶೋಧಕರ ವರದಿಯಲ್ಲಿ ಯಾವುದೇ ಮುಖ್ಯ ಬದಲಾವಣೆ ಇದ್ದ ಸಂದರ್ಭದಲ್ಲಿ, ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ಹೊರಡಿಬಹುದು ಮತ್ತು ಅಂಥ ನಿರ್ದೇಶನಗಳು ವಿಶ್ವವಿದ್ಯಾಲಯದ ಮೇಲೆ ಬಂಧನಕಾರಿಯಾಗಿರತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳ ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರುತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು ;

ಪರಂತು, ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ನೀಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿಯ ದಂಡವನ್ನು ಇತರ ಯಾವುದೇ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾದ ದಂಡಕ್ಕೆ ಬಾಧಕವಾಗದಂತೆ ವಿಧಿಸಬಹುದು.

**57. ಪ್ರವೇಶಿಸುವ ಮತ್ತು ಪರಿಶೋಧಿಸುವ ಅಧಿಕಾರ.–** ಈ ಉದ್ದೇಶಕ್ಕಾಗಿ, ರಾಜ್ಯಸರ್ಕಾರದಿಂದ ಪ್ರಾಧಿಕೃತಗೊಂಡ 'ಎ' ಸಮೂಹದ ಅಧಿಕಾರಿ ದರ್ಜೆಗಿಂತ ಕಡಿಮೆಇಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು, ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಕ್ಯಾಪಿಟೇಶನ್ ಶುಲ್ಕ ನಿಷೇಧ) ಅಧಿನಿಯಮ, 1984ರ (1984ರ ಕರ್ನಾಟಕ ಅಧಿನಿಯಮ 37) ಅಡಿಯಲ್ಲಿ ನಿರ್ದಿಷ್ಟಪಡಿಸಿರಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಆ ಅಧಿನಿಯಮದ 9ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತಹವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಅಧಿಕೃತನಾದ ಅಧಿಕಾರಿ ಎಂಬುದಾಗಿ ಭಾವಿಸತಕ್ಕದ್ದು.

**58. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ನಿರ್ದೇಶನವನ್ನು ನೀಡುವ ಅಧಿಕಾರ.–** (1) ವಿಶ್ವವಿದ್ಯಾಲಯವು ತನ್ನ ರಚನೆ ಅಥವಾ ನಿಗಮನವನ್ನು ನಿಯಂತ್ರಿಸುವ ಕಾನೂನಿಗೆ ಅನುಸಾರವಾಗಿ ತನ್ನ ಸಮಾಪನವನ್ನು ಉದ್ದೇಶಿಸಿದ್ದಲ್ಲಿ, ಅದು ಕನಿಷ್ಠ ಆರು ತಿಂಗಳ ಲಿಖಿತ ಪೂರ್ವ ಸೂಚನೆಯನ್ನು (ನೋಟೀಸು) ಸರ್ಕಾರಕ್ಕೆ ನೀಡತಕ್ಕದ್ದು.

(2) ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು, ಈ ಕೆಳಗಿನವುಗಳ ಬಗ್ಗೆ, ಎಂದರೆ:–

(i) ಪದವಿಯನ್ನು ನೀಡುವುದಕ್ಕಾಗಿ ಬೋಧನೆಯ ಗುಣಮಟ್ಟ;

(ii) ಶಿಕ್ಷಣದ ಗುಣಮಟ್ಟ;

(iii) ಉನ್ನತ ಶಿಕ್ಷಣದ ವ್ಯಾಪಾರೀಕರಣವನ್ನು ತಡೆಗಟ್ಟುವುದು;

(iv) ಅಧಿನಿಯಮದ ಉಪಬಂಧಗಳ ಉಲ್ಲಂಘನೆಯ ಬಗ್ಗೆ, ಯಾವುದಾದರೂ ಇದ್ದಲ್ಲಿ,

– ಇವುಗಳ ಬಗ್ಗೆ ನಿಯತಕಾಲಿಕ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ಸರ್ಕಾರಕ್ಕೆ ವರದಿಯನ್ನು ಕಳುಹಿಸತಕ್ಕದ್ದು.

(3) ದುರ್ವ್ಯವಹರಣೆ, ದುರಾಡಳಿತ ಮತ್ತು ಅಶಿಸ್ತು ಆಗಿದೆ ಎಂಬುದನ್ನು ಗುರುತಿಸಿದರೆ, ಸರ್ಕಾರವು, ವಿಶ್ವವಿದ್ಯಾಲಯದ ಆಡಳಿತ ವರ್ಗದವರಿಗೆ ಆಡಳಿತವನ್ನು ಸರಿಪಡಿಸಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು. ನಿಯಮಿಸಬಹುದಾದ ಅಂಥ ಅವಧಿಯೊಳಗೆ ಆ ನಿರ್ದೇಶನಗಳನ್ನು ಪಾಲಿಸದಿದ್ದಲ್ಲಿ ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ಬಗ್ಗೆ ತೀರ್ಮಾನವನ್ನು ಕೈಗೊಳ್ಳುವ ಹಕ್ಕು ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ವಿಧಾನವು, ಸರ್ಕಾರವು ಈ ಸಂಬಂಧದಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ತನ್ನ ಕಾರಣಗಳನ್ನು ಹೇಳಿಕೊಳ್ಳಲು ಸಮಂಜಸ ಅವಕಾಶಗಳನ್ನು ನೀಡಿದ ಹೊರತು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(5) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟೀಸನ್ನು ಸ್ವೀಕರಿಸಿದ ಮೇಲೆ, ಸರ್ಕಾರವು ಸಂಬಂಧಿಸಿದ ನಿಯಂತ್ರಣಾ ಪ್ರಾಧಿಕಾರದೊಡನೆ ಸಮಾಲೋಚಿಸಿ, ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ಅಥವಾ ವ್ಯಾಸಂಗ ಕ್ರಮವನ್ನು ಪರಿಸಮಾಪನಗೊಳಿಸಲು ಉದ್ದೇಶಿಸಿದ ದಿನಾಂಕದಿಂದ, ವಿಶ್ವವಿದ್ಯಾಲಯದಲ್ಲಿ ನಿಯತ ವ್ಯಾಸಂಗ ಕ್ರಮಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕೊನೆಯ ತಂಡ (ಬ್ಯಾಚ್) ತನ್ನ ವ್ಯಾಸಂಗ ಕ್ರಮವನ್ನು ಮುಗಿಸುವವರೆಗೆ ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ವಿಶ್ವವಿದ್ಯಾಲಯದ ಆಡಳಿತಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು.

**59. ಸಮಾಪನೆಯ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ವೆಚ್ಚಗಳು.–** (1) 58ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ಅದರ ಆಡಳಿತಾತ್ಮಕ ವೆಚ್ಚಗಳನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಭರಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ವಿಶ್ವವಿದ್ಯಾಲಯದ ವೆಚ್ಚವನ್ನು ಭರಿಸಲು 47, 48, 49 ಮತ್ತು 50ನೇ ಪ್ರಕರಣಗಳ ಅಡಿಯಲ್ಲಿ ಉಲ್ಲೇಖಿಸಲಾದ ನಿಧಿಯು ಸಾಕಷ್ಟು ಇಲ್ಲದಿದ್ದಲ್ಲಿ, ಅಂಥ ವೆಚ್ಚವನ್ನು ಸರ್ಕಾರವು, ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಆಸ್ತಿಗಳನ್ನು ವಿಲೇ ಮಾಡುವ ಮೂಲಕ ಭರಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಸಮಾಪನೆಯು ದುರ್ವ್ಯವಹರಣೆ ಅಥವಾ ದುರಾಡಳಿತದ ಕಾರಣಗಳಿಗಾಗಿ ಆಗಿದ್ದರೆ, ಸರ್ಕಾರವು ಅಂಥ ದುರ್ವ್ಯವಹಾರಕ್ಕೆ ಅಥವಾ ದುರಾಡಳಿತಕ್ಕೆ ಹೊಣೆಯಾಗಿರುವ ವ್ಯಕ್ತಿಗಳನ್ನು ಗುರುತಿಸುವ ಮತ್ತು ಅವರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಂಡನೆಯನ್ನು ವಿಧಿಸಲು ಸ್ವತಂತ್ರವಾಗಿರತಕ್ಕದ್ದು.

**60. ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಅಥವಾ ಆದೇಶದ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ಅಧಿಸೂಚನೆ ಅಥವಾ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**61. ರಾಜ್ಯ ಸರ್ಕಾರದ ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಉಭಯ ಸದನಗಳು ಒಪ್ಪಿದರೆ ತದನಂತರ ಅಂಥ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನು ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೨೨, ೨೦೧೩ (ಚೈತ್ರ ೧, ಶಕ ವರ್ಷ ೧೯೩೪) | ನಂ. ೬೨೨ |
|---|---|---|
| Part – IV-A | Bangalore, Friday, March 22, 2013 (Chaithra 1, Shaka Varsha 1934) | No. 622 |

## KARNATAKA ELECTRICITY REGULATORY COMMISSION

### NOTIFICATION

**No. B/15/12 Bangalore, Dated 21st March 2013**

### KERC (Fuel Cost Adjustment Charges) Regulations, 2013

**Preamble:**

Whereas the Commission in its Tariff Order dated 30th April 2012 has decided to introduce a mechanism for collection of Fuel Cost adjustment from consumers and notified the draft Regulations in the matter on 5th October 2012 and invited the views, suggestions, objections, if any, on the procedure to be followed for determining the fuel cost adjustment charges from time to time. Further, the Commission held a public hearing in the matter on 14th December 2012 at the Court hall of the Commission and has considered the views suggestions, and objections received, and the submissions made in the public hearing in this regard.

Therefore the Commission, in exercise of the powers conferred under Section 181 and Section 62(4) of the Electricity Act 2003, the Commission hereby notifies the Regulations for collection of Fuel cost adjustment Charges.

1. **Short Title and commencement:**

(i) These Regulations may be called the KERC (Fuel Cost Adjustment Charges) Regulations, 2013

(ii) They shall come into effect from the date of their Notification in the official gazette.

(iii) They shall apply to the whole of the State of Karnataka.

2. **Definitions**

(i) In these Regulations, unless the context otherwise requires:

a. "**Act**" means the Electricity Act, 2003, as amended from time to time.

b. "**Billing quarter"** means the period of three months commencing from the beginning of a calendar month during which FAC is proposed to be recovered.

c. "**Commission**" means the Karnataka Electricity Regulatory Commission;

d. **'Distribution Licensee'** means a licensee authorized to operate and maintain a distribution system for supplying electricity to the consumers in his area of supply.

e. **"Fuel Adjustment Charges"** means the charges as determined in these Regulations for recovery in a billing quarter on the basis of change in the cost of fuel in the second quarter preceding the billing quarter.

(ii) Words or expressions occurring in these Regulations and not defined herein above shall bear the same meaning as in the Act or the Karnataka Electricity Reforms Act and in case of any inconsistency, therein the provisions of the Act shall prevail.

3. **Collection of Fuel Cost Adjustment Charge (FAC):**

3.1 Every Distribution Licensee shall collect Fuel Cost Adjustment charges from its consumers during a billing quarter in accordance with the provisions in these Regulations as part of the tariff payable by the consumer. Explanation: The first billing quarter shall commence from 1st July 2013.

Provided that, where the FAC in any billing quarter exceeds ten paise per unit or any other limit fixed by the Commission in the tariff order applicable for the relevant year, the distribution licensee shall not recover FAC in excess of ten paise per unit or the limit fixed by the Commission without the prior approval of the Commission.

Provided that, where the amount of FAC is negative in any billing quarter, the savings in FAC upto ten paise or the limit as fixed by the Commission shall be passed on to the Consumers.

3.2 The distribution licensees shall commence billing of FAC from the first meter reading date of the billing quarter.

4. **Computation of FAC:**

4.1 Distribution Licensees shall determine the per unit Fuel Cost Adjustment charges recoverable from consumers on the basis of the variation in the fuel cost on energy purchased from Generators as specified in Clause 5 of these Regulations.

4.2 For the purpose of determining the Fuel Cost Adjustment Charges, the transmission losses in respect of the transmission network and distribution losses in respect of distribution licensee's network to be considered shall be the losses as approved by the Commission in the relevant tariff orders issued from time to time.

4.3 The computation of FAC as provided in these Regulations shall ordinarily be completed by the Distribution Licensees within 45 days before the commencement of each billing quarter.

5. **Formula for computation of FAC:**

5.1 The formula for computation of the Fuel Cost Adjustment Charges shall be as under:

$$\mathbf{FAC = [(VC_{SG} + VC_{CGS} + VC_{IPP} + Z)/\ Q]*1000}$$

Where

$VC_{SG}$= Change in variable cost of state owned power generating stations

$VC_{CGS}$ = Change in variable cost of Central Generating Stations;

$VC_{IPP}$ = Change in variable cost of Generating Stations of other Independent Power Producers having long term PPAs with the distribution licencees.

**Q** = Actual sales inclusive of metered sales and assessed sales to IP Sets & BJ/KJ categories.

**Z** = Adjustment factor for any over/under recovery

**Change in Variable cost [(VC)** $_{SG,\ CGS,\ IPP]}$ is the difference between the variable cost computed on the basis of delivered cost of fuel for coal / gas / liquid fuel based generating stations and the variable cost as allowed in the Tariff Order pertaining to the relevant period.

The **'Fuel Costs'** for the purpose of computing FAC as per these Regulations shall include only delivered cost of fuel at the generating station computed as per **Format-1** annexed to these Regulations.

**Adjustment Factor (Z)** for a billing quarter shall include:

i) Variation in actual FAC collected and allowable FAC for any previous billing quarter which has not been factored earlier.

ii) Any variations observed by the Commission during post facto validation of the data furnished in any quarter; and,

iii) Any variations in variable costs that would be noticed by the distribution licensees subsequent to incorporation of FAC for a billing quarter.

This shall be computed as per **Format -2** annexed to these Regulations.

**6. Accounting and Billing of FAC:**

6.1 The distribution licensee shall indicate the rate and amount of FAC separately in the consumer bills and record the amount of FAC collected under a separate head of account in its books of accounts.

6.2 The FAC determined as per the formula provided in these Regulations shall be in paise per unit rounded off to the nearest integer.

6.3 All documents to be furnished to the Commission for approval of FAC for each quarter shall be duly signed by the authorized representative of the distribution licensee and duly certified by a Chartered Accountant.

**7. Information and Publication of FAC:**

7.1 The Distribution Licensee shall furnish to the Commission, its computations of FAC for any billing quarter as per the formats specified in these Regulations at least 30 days before the commencement of the billing quarter.

7.2 The distribution licensee shall publish FAC proposed to be collected for a billing quarter in at least one English and one Kannada Newspaper having wide circulation in its area of supply for information of the consumers. Such publication shall be issued at least one week before the commencement of the billing quarter. Copies of FAC assessment shall also be posted on the websites of the Distribution Licensees for information of the consumers/stakeholders.

**8. Power to remove difficulties**

If any difficulty arises in giving effect to any of the provisions of these Regulations, the Commission on application by the distribution licensee or suo-moto may, by general or special order, take such action which appears to be necessary or expedient for the purpose of removing such difficulties not being inconsistent with the provisions of the Act.

**9. Power to amend:**

The Commission may from time to time add, vary, alter, modify or amend any provisions of these regulations.

Approved by the Commission

**N. SRIRAMAN**
Secretary
Karnataka Electricity Regulatory Commission

## Annexe to KERC (Fuel Cost Adjustment Charges) Regulations, 2013

Name of the ESCOM ………………………………………………Fuel Cost Adjustment charges- ……………………………… Quarter of FY….. FORMAT-1

| Name of the Generating Station* | Approved Variable charges#- Rs/Unit | Month-1 | | | | Month-2 | | | | Month-3 | | | | Total- …. Quarter | |
|---|---|---|---|---|---|---|---|---|---|---|---|---|---|---|---|
| | | Actual Variable charges - Rs/Unit | Change variable charges - Rs/Unit | Quantum of energy in MU | Increase in fuel cost-Rs. Crs | Actual Variable charges - Rs/Unit | Change variable charges - Rs/Unit | Quantum of energy in MU | Increase in fuel cost Rs. Crs | Actual Variable charges - Rs/Unit | Change variable charges - Rs/Unit | Quantum of energy in MU | Increase in fuel cost-Rs. Crs | Quantum of energy in MU | Increase in fuel cost-Rs. Crs |
| **State owned Generating Stations** | | | | | | | | | | | | | | | |
| RTPS 1 to 7 | | | | | | | | | | | | | | | |
| RTPS 8 | | | | | | | | | | | | | | | |
| BTPS | | | | | | | | | | | | | | | |
| YGDS | | | | | | | | | | | | | | | |
| **Total- $VC_{SG}$** | | | | | | | | | | | | | | | |
| **Central Generating Stations** | | | | | | | | | | | | | | | |
| NTPC RSTPS 1& 2 | | | | | | | | | | | | | | | |
| NTPC Talcher | | | | | | | | | | | | | | | |
| NTPC Stage3 | | | | | | | | | | | | | | | |
| Simhadri | | | | | | | | | | | | | | | |
| NLC TPS Expansion-1 | | | | | | | | | | | | | | | |
| NLC TPS-Stage-1 | | | | | | | | | | | | | | | |
| NLC TPS -Stage-2 | | | | | | | | | | | | | | | |
| **Total- $VC_{CGS}$** | | | | | | | | | | | | | | | |
| **Major IPPs** | | | | | | | | | | | | | | | |
| Tata | | | | | | | | | | | | | | | |
| Rayalseema | | | | | | | | | | | | | | | |
| UPCL(Provisional ) | | | | | | | | | | | | | | | |
| **Total-$VC_{IPP}$** | | | | | | | | | | | | | | | |
| **Grand Total= $VC_{SG}$ + $VC_{CGS}$+ $VC_{IPP}$** | | | | | | | | | | | | | | | |

* Stations/Source of Generation is indicative. Any other such Stations to be covered as per the regulations for FAC shall be included

# Variable Charges as approved in the Relevant Tariff Orders of the Commission

Note: The format shall be signed by the authorised representative of ESCOMs duly certified by chartered accountant

### Annex to KERC (Fuel Cost Adjustment Charges) Regulations, 2013

**Computation of Adjustment Factor (Z)** **FORMAT-2**

| Sl. No | Particulars | Amount in Rs. Crs |
|---|---|---|
| a | FAC proposed by ESCOM for … Qtr of FY….. | a |
| b | FAC approved by the Commission for …Qtr of FY…. | b |
| c | FAC actually collected by the ESCOM in the relevant billing quarter (As per monthly DCB Statements) | c |
| d | Increase / Decrease in FAC charges to be adjusted in the … Qtr of ….FY | d= (c-b) |
| e | Any fuel cost variations noticed now* after filing for the quarter specified in 'a' | e |
| f | Any variations observed by the Commission in its approval of FAC for the previous billing quarter | f |
| | **Adjustment factor ( Z )** | **Z=(d+e+f)** |

* Furnish details in a separate statement along with documents as necessary

Note: The format shall be signed by the authorised representative of ESCOMs duly certified by chartered accountant

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಶುಕ್ರವಾರ, ಮಾರ್ಚ್ ೨೨, ೨೦೧೩ (ಚೈತ್ರ ೧, ಶಕ ವರ್ಷ ೧೯೩೪)<br>Bangalore, Friday, March 22, 2013 (Chaithra 1, Shaka Varsha 1934) | ನಂ. ೬೨೩<br>No. 623 |
|---|---|---|

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4 ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 437 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 19.03.2013**

ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಕಸಬಾ ಹೋಬಳಿ, ಜಾಜೂರು ಗ್ರಾಮದ ಈ ಕೆಳಕಂಡ ಸರ್ವೆ ನಂಬರ್ ಮತ್ತು ವಿಸ್ತೀರ್ಣದ ಜಮೀನುಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (1966 ಕರ್ನಾಟಕ ಕಾಯ್ದೆ ನಂ: 18) ಮೇರೆಗೆ ವಿಧಿ 1(3) 3(1) ಮತ್ತು 28(1) ರ ಅಧಿಸೂಚನೆಗಳನ್ನು ಸಂಖ್ಯೆ: ಸಿಐ 292 ಎಸ್‌ಪಿಕ್ಯೂ 2009 ದಿನಾಂಕ: 29.09.2009 ರ ಪ್ರಕಾರ ಹೊರಡಿಸಲಾಗಿದೆ. ಕರ್ನಾಟಕ ರಾಜ್ಯ ಪತ್ರದ ಭಾಗ 3–1ರ ಪುಟ ಸಂಖ್ಯೆ: 1 ರಿಂದ 24 ರಲ್ಲಿ ದಿನಾಂಕ: 07.10.2009 ರಂದು ಪ್ರಕಟಣೆಗೊಂಡಿರುತ್ತದೆ.

ಮೇಲ್ಕಂಡ ಅಧಿಸೂಚನೆಯಲ್ಲಿನ ಈ ಕೆಳಕಂಡ ಸರ್ವೆ ನಂಬರ್ ಮತ್ತು ವಿಸ್ತೀರ್ಣದ ಜಮೀನುಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ ವಿಧಿ 4 ರಲ್ಲಿ ದತ್ತವಾಗಿರುವ ಅಧಿಕಾರದ ಮೇರೆಗೆ ಕೈಗಾರಿಕಾ ಪ್ರದೇಶದಿಂದ ಹೊರತುಪಡಿಸಿ, ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

**ಗ್ರಾಮ: ಜಾಜೂರು** **ಹೋಬಳಿ: ಕಸಬಾ** **ತಾಲ್ಲೂಕು: ಅರಸೀಕೆರೆ** **ಜಿಲ್ಲೆ : ಹಾಸನ**

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಇನ್ (ಎ–ಗುಂ) | ಖರಾಬು (ಎ–ಗುಂ) | ಬಾಕಿ (ಎ–ಗುಂ) | ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ. |
| 1 | 28 | 5–03 | – | 5–03 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ | ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು |
| 2 | 29/1 | 2–20 | – | 2–20 | | | | |
| 3 | 29/1ಎ1 | 0–17 | – | 0–17 | | | | |
| 4 | 29/2ಎ2 | 0–06 1/2 | – | 0–06 1/2 | | | | |
| 5 | 29/2ಎ3 | 0–06 1/2 | – | 0–06 1/2 | | | | |
| 6 | 29/2ಎ4 | 0–14 | 0–01 | 0–13 | | | | |
| 7 | 29/2ಎ5 | 0–12 | – | 0–12 | | | | |
| 8 | 29/2ಎ6 | 0–09 1/2 | 0–01 | 0–08 1/2 | | | | |
| 9 | 29/2ಎ7 | 0–08 1/2 | – | 0–08 1/2 | | | | |
| 10 | 29/2ಬಿ | 4–23 | – | 4–23 | | | | |
| 11 | 29/3 | 1–08 | 0–02 | 1–06 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ | ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು |
| 12 | 30/1 | 3–27 | – | 3–27 | | | | |
| 13 | 30/2ಎ | 2–01 | – | 2–01 | | | | |
| 14 | 30/2ಬಿ | 0–39 | – | 0–39 | | | | |
| 15 | 31/1 | 3–33 | 0–04 | 3–29 | | | | |
| 16 | 31/2ಎ | 0–35 | 0–02 | 0–33 | | | | |
| 17 | 31/2ಬಿ | 0–23 | – | 0–23 | | | | |
| 18 | 31/2ಸಿ | 1–12 | 0–02 | 1–10 | | | | |
| 19 | 32/1 | 2–15 | 0–01 | 2–14 | | | | |
| 20 | 32/2 | 2–08 | 0–01 | 2–07 | | | | |
| 21 | 32/3 | 2–28 | 0–04 | 2–24 | | | | |
| 22 | 32/4 | 2–03 | 0–01 | 2–02 | | | | |
| 23 | 34/1 | 1–19 | – | 1–19 | | | | |
| 24 | 34/2ಎ | 4–01 | 0–02 | 3–39 | | | | |

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ (ಎ–ಗುಂ) | ಖರಾಬು (ಎ–ಗುಂ) | ಬಾಕಿ (ಎ–ಗುಂ) | ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ. |
| 25 | 34/2ಬಿ | 0–33 | – | 0–33 | | | | |
| 26 | 34/3 | 0–12 | – | 0–12 | | | | |
| 27 | 35/1 | 0–20 | – | 0–20 | | | | |
| 28 | 35/2 | 0–20 | – | 0–20 | | | | |
| 29 | 35/3 | 1–07 | – | 1–07 | | | | |
| 30 | 35/4 | 1–08 | 1–08 | ಎಎಲ್ಎನ್ | | | | |
| 31 | 36/1 | 3–26 | 0–01 | 3–25 | | | | |
| 32 | 36/2 | 2–36 | – | 2–36 | | | | |
| 33 | 36/3 | 0–25 | 0–25 | ಎಎಲ್ಎನ್ | | | | |
| 34 | 37 | 0–32 | – | 0–32 | | | | |
| 35 | 39/1ಎ | 3–12 | 3–12 | ಎಎಲ್ಎನ್ | | | | |
| 36 | 39/2 | 3–22 | 3–22 | ಎಎಲ್ಎನ್ | | | | |
| 37 | 40/1 | 1–15 | – | 1–15 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ<br>ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | | | |
| 38 | 40/2ಎ | 1–37 | – | 1–37 | | | | |
| 39 | 40/2ಬಿ | 1–02 | – | 1–02 | | | | |
| 40 | 40/3 | 0–28 | – | 0–28 | | | | |
| 41 | 40/4ಎ1 | 0–10 1/2 | – | 0–10 1/2 | | | | |
| 42 | 40/4ಎ2 | 0–08 1/2 | – | 0–08 1/2 | | | | |
| 43 | 40/4ಎ3 | 0–09 1/2 | – | 0–09 1/2 | | | | |
| 44 | 40/4ಎ4 | 0–10 | – | 0–10 | | | | |
| 45 | 40/4ಎ5 | 0–09 1/2 | – | 0–09 1/2 | | | | |
| 46 | 40/4ಬಿ | 1–07 | – | 1–07 | | | | |
| 47 | 40/5 | 0–21 | – | 0–21 | | | | |
| 48 | 40/6 | 0–12 | – | 0–12 | | | | |
| 49 | 40/7 | 0–20 | – | 0–20 | | | | |
| 50 | 41/1 | 1–38 | 0–03 | 1–35 | | | | |
| 51 | 41/2 | 0–28 | – | 0–28 | | | | |
| 52 | 41/3 | 1–25 | – | 1–25 | | | | |
| 53 | 41/4 | 1–31 | 0–02 | 1–29 | | | | |
| 54 | 41/5 | 0–14 | – | 0–14 | | | | |
| 55 | 41/6 | 0–08 | – | 0–08 | | | | |
| 56 | 41/7 | 0–12 | – | 0–12 | | | | |
| 57 | 41/8 | 0–06 | – | 0–06 | | | | |
| 58 | 41/9 | 0–29 | – | 0–29 | | | | |
| 59 | 41/10 | 0–28 | – | 0–28 | | | | |
| 60 | 41/11 | 0–03 | – | 0–03 | | | | |
| 61 | 42/1 | 2–00 | 0–01 | 1–39 | | | | |
| 62 | 42/2 | 2–00 | 0–01 | 1–39 | | | | |
| 63 | 43/1ಎ | 1–35 | – | 1–35 | | | | |
| 64 | 43/1ಬಿ | 2–01 | – | 2–01 | | | | |

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಐನ್ (ಎ–ಗುಂ) | ಖರಾಬು (ಎ–ಗುಂ) | ಬಾಕಿ (ಎ–ಗುಂ) | ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ. |
| 65 | 43/2 | 5–11 | 0–01 | 5–10 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ<br>ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | | | |
| 66 | 44/1 | 1–07 | 0–01 | 1–06 | | | | |
| 67 | 44/2 | 1–16 | – | 1–16 | | | | |
| 68 | 44/3 | 1–04 | – | 1–04 | | | | |
| 69 | 44/4 | 1–10 | – | 1–10 | | | | |
| 70 | 44/5ಎ1 | 1–03 | – | 1–03 | | | | |
| 71 | 44/5ಎ2 | 0–05 | – | 0–05 | | | | |
| 72 | 44/5ಬಿ | 0–26 | – | 0–26 | | | | |
| 73 | 44/6 | 0–18 | – | 0–18 | | | | |
| 74 | 45/1 | 2–08 | – | 2–08 | | | | |
| 75 | 45/2 | 2–34 | – | 2–34 | | | | |
| 76 | 45/3 | 3–05 | 0–03 | 3–02 | | | | |
| 77 | 45/4 | 1–35 | – | 1–35 | | | | |
| 78 | 45/5 | 1–26 | – | 1–26 | | | | |
| 79 | 46/1 | 1–36 | – | 1–36 | | | | |
| 80 | 46/2 | 3–17 | 0–05 | 3–12 | | | | |
| 81 | 46/3 | 0–37 | 0–03 | 0–34 | | | | |
| 82 | 46/4 | 1–29 | 0–01 | 1–28 | | | | |
| 83 | 46/5 | 1–32 | 0–01 | 1–31 | | | | |
| 84 | 47/1 | 4–31 | 0–04 | 4–27 | | | | |
| 85 | 47/2 | 2–24 | 0–02 | 2–22 | | | | |
| 86 | 47/3 | 3–07 | 0–03 | 3–04 | | | | |
| 87 | 47/4 | 0–20 | – | 0–20 | | | | |
| 88 | 47/5 | 0–39 | – | 0–39 | | | | |
| 89 | 48/1 | 2–00 | – | 2–00 | | | | |
| 90 | 48/2ಎ1 | 1–10 | – | 1–10 | | | | |
| 91 | 48/2ಎ2 | 0–20 | – | 0–20 | | | | |
| 92 | 48/3 | 1–28 | – | 1–28 | | | | |
| 93 | 48/4ಎ | 0–36 | – | 0–36 | | | | |
| 94 | 48/4ಬಿ1 | 0–28 | – | 0–28 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ<br>ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು<br>ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | | | |
| 95 | 48/4ಬಿ2 | 0–20 | 0–20 | ಎಎಲ್ಎನ್ | | | | |
| 96 | 48/5ಎ | 0–23 | – | 0–23 | | | | |
| 97 | 48/5ಬಿ | 0–38 | 0–38 | ಎಎಲ್ಎನ್ | | | | |
| 98 | 48/6 | 1–37 | – | 1–37 | | | | |
| 99 | 48/7 | 0–20 | 0–20 | ಎಎಲ್ಎನ್ | | | | |
| 100 | 49/1 | 3–19 | – | 3–19 | | | | |
| 101 | 49/2 | 1–02 | – | 1–02 | | | | |
| 102 | 49/3 | 0–38 | 0–32 | 0–06 | | | | |
| 103 | 49/4 | 0–32 | 0–32 | ಎಎಲ್ಎನ್ | | | | |

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ | | | ಚಕ್ಕುಬಂದಿ | | | |
|---|---|---|---|---|---|---|---|---|
| | | ಇನ್ (ಎ–ಗುಂ) | ಖರಾಬು (ಎ–ಗುಂ) | ಬಾಕಿ (ಎ–ಗುಂ) | ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ. |
| 104 | 49/5 | 1–08 | 1–08 | ಎಎಲ್‌ಎನ್ | | | | |
| 105 | 49/6 | 1–20 | 1–20 | ಎಎಲ್‌ಎನ್ | | | | |
| 106 | 49/7 | 0–19 | 0–19 | ಎಎಲ್‌ಎನ್ | | | | |
| 107 | 49/8 | 0–17 | – | 0–17 | | | | |
| 108 | 50<br>50 | 43–04<br>1–10 | 43–04<br>– | –<br>1–10 | | | | |
| 109 | 93/1 | 4–02 | 0–02 | 4–00 | | | | |
| 110 | 93/2 | 1–36 | – | 1–36 | | | | |
| 111 | 94/1 | 1–21 | – | 1–21 | | | | |
| 112 | 94/2 | 5–30 | – | 5–30 | | | | |
| 113 | 94/3 | 0–22 | – | 0–22 | | | | |
| 114 | 98/1ಎ1 | 0–27 | – | 0–27 | | | | |
| 115 | 98/1ಎ2 | 0–30 | – | 0–30 | | | | |
| 116 | 98/1ಬಿ | 2–25 | 0–04 | 2–21 | | | | |
| 117 | 98/2 | 0–27 | – | 0–27 | | | | |
| 118 | 98/1ಸಿ1 | 0–06 | – | 0–06 | | | | |
| 119 | 98/1ಸಿ2 | 2–00 | – | 2–00 | | | | |
| 120 | 98/1ಡಿ1 | 0–26 | – | 0–26 | | | | |
| 121 | 98/1ಡಿ2 | 1–02 | – | 1–02 | | | | |
| 122 | 98/1ಇ | 1–08 | – | 1–08 | ಪೂರ್ವಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ಪಶ್ಚಿಮಕ್ಕೆ : ಕಲ್ಲನಾಯಕನಹಳ್ಳಿ ಗಡಿ | ಉತ್ತರಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು | ದಕ್ಷಿಣಕ್ಕೆ : ರಸ್ತೆ ಮತ್ತು ಉಳಿದ ಸರ್ವೆ ನಂಬರ್‌ಗಳು |
| 123 | 98/1ಎಫ್ | 1–05 | – | 1–05 | | | | |
| 124 | 110/1 | 0–20 | 0–04 1/2 | 0–15 1/2 | | | | |
| 125 | 110/2 | 1–17 1/2 | 0–07 | 1–10 1/2 | | | | |
| 126 | 110/3 | 1–06 1/2 | 0–11 1/2 | 0–35 | | | | |
| 127 | 111 | 2–26 | 0–21 | 2–05 | | | | |
| 128 | 112/1 | 2–20 1/4 | 0–00 1/4 | 2–20 | | | | |
| 129 | 112/2 | 0–21 3/4 | 0–01 3/4 | 0–20 | | | | |
| 130 | 113 | 3–14 | 0–08 | 3–06 | | | | |
| 131 | 114 | 2–06 | – | 2–06 | | | | |
| | **ಒಟ್ಟು** | **238–21** | **61–13** | **177–08** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೨೩, ೨೦೧೩ (ಚೈತ್ರ ೨, ಶಕ ವರ್ಷ ೧೯೩೪) | ನಂ. ೬೨೪ |
| Part – IV-A | Bangalore, Saturday, March 23, 2013 (Chaithra 2, Shaka Varsha 1934) | No. 624 |

## CO-OPERATION SECRETARIAT

### NOTIFICATION

### No: CO 20 CLM 2013, Bengaluru, dated: 18.03.2013

In exercise of the powers conferred by sub-section (1) of section 39AA of the Karnataka Co-operative Societies (Amendment) Act 2012 (Karnataka Act No.3 of 2013), the Government of Karnataka hereby constitute Co-operative Election Commission consisting of a Co-operative Election Commissioner and a Secretary for conducting elections to Co-operative Societies.

By Order and in the Name of the Governor of Karnataka,

**G.S. RAMANAREDDY**
Officer on Special Duty & Ex-officio
Joint Secretary to Government
Co-operation Department

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೨೩, ೨೦೧೩ (ಚೈತ್ರ ೨, ಶಕ ವರ್ಷ ೧೯೩೪) | ನಂ. ೬೨೫ |
| Part – IV-A | Bangalore, Saturday, March 23, 2013 (Chaithra 2, Shaka Varsha 1934) | No. 625 |

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಗ್ರಾಅಪ 364 ಜಿಪಸ 2011, ಬೆಂಗಳೂರು, ದಿನಾಂಕ: 22–03–2013

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) 311ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರದನ್ವಯ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಚುನಾವಣಾ ಆಯೋಗ (ನ್ಯಾಯಲಯದ ಕಾರ್ಯಕಲಾಪಗಳನ್ನು ನಡೆಸುವ) ನಿಯಮಗಳು, 2013 ರ ಕರಡು ನಿಯಮಗಳನ್ನು, ಸದರಿ ಅಧಿನಿಯಮದ ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಸದರಿ ಕರಡು ನಿಯಮಗಳಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡು ನಿಯಮಗಳನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಳಿಸಲಾದ ದಿನಾಂಕದಿಂದ ಹದಿನೈದು ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚಿಸಲಾಗಿದೆ.

ಮೇಲೆ ತಿಳಿಸಲಾದ ಅವಧಿಯೊಳಗಾಗಿ ಸದರಿ ಕರಡು ನಿಯಮಗಳ ಸಂಬಂಧದಲ್ಲಿ ಯಾವುದೇ ವ್ಯಕ್ತಿಯಿಂದ ಸ್ವೀಕೃತವಾದ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, 3ನೇ ಮಹಡಿ, ಬೆಂಗಳೂರು–560 001 ಇವರಿಗೆ ಕಳುಹಿಸತಕ್ಕದ್ದು.

#### ಕರಡು ನಿಯಮಗಳು

1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.– (1) ಈ ನಿಯಮಗಳನ್ನು ರಾಜ್ಯ ಚುನಾವಣಾ ಆಯೋಗ (ನ್ಯಾಯಾಲಯ ಕಾರ್ಯಕಲಾಪಗಳನ್ನು ನಡೆಸುವ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯ ಪಡಿಸದ ಹೊರತು,–

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮದ ಸಂಖ್ಯೆ 14);

(ಬಿ) "ರಾಜ್ಯ ಚುನಾವಣಾ ಆಯೋಗ"" ಎಂದರೆ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ (1993ರ ಕರ್ನಾಟಕ ಅಧಿನಿಯಮದ ಸಂಖ್ಯೆ 14) 308ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ರಾಜ್ಯ ಚುನಾವಣಾ ಆಯೋಗ;

(ಸಿ) "ಪ್ರಕರಣ" ಎಂದರೆ ಈ ಅಧಿನಿಯಮದಲ್ಲಿನ ಒಂದು ಪ್ರಕರಣ;

(ಡಿ) "ನ್ಯಾಯಾಲಯದ ಅಧಿಕಾರಿ" ಎಂದರೆ, ರಾಜ್ಯ ಚುನಾವಣಾ ಆಯೋಗವು ಪದನಾಮಿಕರಿಸಿದ ಅಧಿಕಾರಿ;

(ಇ) ಈ ನಿಯಮಗಳಲ್ಲಿ ಬಳಸಲಾದ ಮತ್ತು ಪರಿಭಾಷಿಸದೆ ಇರುವ ಆದರೆ ಅಧಿನಿಯಮದಲ್ಲಿ ಪರಿಭಾಷಿಸಲಾದ ಪದಗಳು ಹಾಗೂ ಅಭಿವ್ಯಕ್ತಿಗಳು ಅನುಕ್ರಮವಾಗಿ ಅಧಿನಿಯಮಗಳಲ್ಲಿ ಗೊತ್ತುಪಡಿಸಲಾದ ಅರ್ಥವನ್ನೇ ಹೊಂದಿರುತ್ತವೆ.

3. **ಉಡುಪು ಸಂಹಿತೆ.–** ನ್ಯಾಯವಾದಿಗಳು ಉಚ್ಛ ನ್ಯಾಯಾಲಯವು ನಿಗದಿಪಡಿಸಿರುವ ಉಡುಪಿನಲ್ಲಿ ಅಂದರೆ ಗೌನನ್ನು ಹೊರತುಪಡಿಸಿದ ಉಡುಪಿನಲ್ಲಿ ನ್ಯಾಯಾಲಯಕ್ಕೆ ಹಾಜರಾಗಲು ಅನುಮತಿಸತಕ್ಕದ್ದು.

4. **ವಿಚಾರಣಾ ಸಮಯ.–** ಈ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನ್ಯಾಯಾಲಯದ ವಿಚಾರಣೆಯ ಸಮಯವು ನ್ಯಾಯಾಲಯದ ಎಲ್ಲಾ ಕೆಲಸದ ದಿನಗಳಂದು ಬೆಳಗ್ಗೆ 11.00 ರಿಂದ ಮಧ್ಯಾಹ್ನ 1.00 ಗಂಟೆಯ ವರೆಗೆ ಮತ್ತು ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆಯ ವರೆಗೆ ಇರತಕ್ಕದ್ದು.

5. **ವ್ಯಾಜ್ಯ ಪಟ್ಟಿ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಎಲ್ಲಾ ಮೊಕದ್ದಮೆಗಳಿಗೆ ಸಂಬಂಧಿಸಿದ ವ್ಯಾಜ್ಯ ಪಟ್ಟಿಯನ್ನು ನ್ಯಾಯಾಲಯದ ಕೆಲಸದ ಸಮಯವು ಅಂತ್ಯಗೊಳ್ಳುವ ಮುನ್ನವೇ ತಯಾರಿಸತಕ್ಕದ್ದು ಮತ್ತು ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು.

(2) ಪ್ರತಿಯೊಂದು ವ್ಯಾಜ್ಯಪಟ್ಟಿಯು ಈ ಕೆಳಕಂಡ ವಿವರಗಳನ್ನೊಳಗೊಂಡಿರತಕ್ಕದ್ದು, ಎಂದರೆ :–

| (1) | (2) | (3) | (4) |
|---|---|---|---|
| ಕ್ರಮ ಸಂಖ್ಯೆ | ಪ್ರಕರಣಗಳ ಸಂಖ್ಯೆ | ಪಕ್ಷಗಾರರ ಹೆಸರುಗಳು | ಹಾಜರಾಗುವ ಪಕ್ಷಗಾರರ ಅಥವಾ ವಕೀಲರ ಅಥವಾ ಪ್ರತಿನಿಧಿಯ ಹೆಸರು |

(3) ವಿಚಾರಣಾ ದಿನಾಂಕವನ್ನು ಪಕ್ಷಗಾರರ ಅಥವಾ ಅವರ ಪ್ರತಿನಿಧಿಗಳ ಸಮಕ್ಷಮದಲ್ಲಿ ಸೂಚಿಸಿದ್ದಲ್ಲಿ, ಸಂಬಂಧಿಸಿದ ದಿನಾಂಕದಂದು ವ್ಯಾಜ್ಯ ಪಟ್ಟಿಯಲ್ಲಿ ಪ್ರಕರಣದ ವಿಷಯ ಸೂಚಿಸಿಲ್ಲವೆಂತಲೂ ಅಥವಾ ತಪ್ಪಾಗಿ ನಮೂದಿಸಲಾಗಿದೆಯೆಂತಲೂ ಅಥವಾ ವಿಷಯದ ವಿವರಗಳನ್ನು ಕೈ ಬಿಡಲಾಗಿದೆಯೆಂಬ ಕಾರಣವು ಪಕ್ಷಗಾರರ ಅಥವಾ ಪ್ರತಿನಿಧಿಗಳ ಗೈರು ಹಾಜರಾತಿಗೆ ಒಂದು ಕಾರಣವಾಗತಕ್ಕದ್ದಲ್ಲ.

6. **ದೂರುಗಳ ಹೂಡುವಿಕೆ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದೂರನ್ನು ಸಲ್ಲಿಸುವುದಾದರೆ ಅದನ್ನು ಮೂರು ಸೆಟ್ಟುಗಳಲ್ಲಿ ಹಾಗೂ ಎದುರು ವಾದಿ(ಗಳ) / ಪ್ರತಿವಾದಿ (ಗಳ) ಗಳ ಸಂಖ್ಯೆಗೆ ಸಮನಾದಷ್ಟು ಸಂಖ್ಯೆಯ ಹೆಚ್ಚುವರಿ ಪ್ರತಿಗಳೊಂದಿಗೆ ಸಲ್ಲಿಸತಕ್ಕದ್ದು.

(2) ಪ್ರತಿಯೊಂದು ದೂರು ಅವಶ್ಯ ದಾಖಲೆಗಳ ಸಹಿತ ದೂರಿನ ಸ್ಪಷ್ಟ ವಿವರಗಳನ್ನು ಮತ್ತು ದಾಖಲೆಗಳನ್ನು ಒಳಗೊಂಡಿರತಕ್ಕದ್ದು. ಇದರೊಂದಿಗೆ ದೂರನ್ನು ರುಜುವಾತುಪಡಿಸುವದಕ್ಕೆ ಅವಶ್ಯಕವಾದ ದಾಖಲೆಗಳ ಪ್ರತಿಗಳು ಸಹಾ ಜೊತೆಗೊಂಡಿರತಕ್ಕದ್ದು.

7. **ದೂರುಗಳಿಗೆ ನೀಡಲಾದ ಶೀರ್ಷಿಕೆಗಳು.–** ದಾವೆಗಳನ್ನು ನ್ಯಾ.ಪ್ರ.ಜಿ.ಪಿ/ಸಿ.ಟಿ.ಪಿ/ಸಿಜೆಡ್‌ಪಿ/ಎಡಿಎ ಹಾಗೂ ಇತರೆ ಎಂದು ಉಲ್ಲೇಖಿಸತಕ್ಕದ್ದು.

ಉದಾ: ಎಸ್‌ಇಸಿ 02 ಎಡಿಎ 2011.

8. **ದೂರನ್ನು ದಾಖಲಿಸುವ ಕುರಿತಾದ ಪ್ರಕ್ರಿಯೆ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಹಾಜರುಪಡಿಸಬೇಕಾದ ಅಥವಾ ದಾಖಲಿಸಬೇಕಾದ ಪ್ರತಿಯೊಂದು ವಕಾಲತ್ತು, ಪ್ರಮಾಣಪತ್ರ (ಅಫಿಡವಿಟ್), ನಿವೇದನಾ ಪತ್ರ ಹಾಗೂ ದಾಖಲೆಗಳ ಪಟ್ಟಿಗಳು ಚೊಕ್ಕವಾಗಿ ಹಾಗೂ ಸುಸ್ಪಷ್ಟವಾಗಿ ಬಾಳಿಕೆ ಬರುವಂತಹ ಪೇಪರ್‌ನಲ್ಲಿ ಅಂದರೆ ಮೆಟ್ರಿಕ್ ಎ4 ಅಳತೆಯಿದ್ದು (30.5 ಸೆಂ.ಮಿ ಉದ್ದ ಹಾಗೂ 21.5 ಸೆಂ.ಮಿ ಅಗಲ) 4.9 ಕಿ.ಗ್ರಾಂ.ಗೆ ಕಡಿಮೆಯಿರದ ತೂಕ ಉಳ್ಳ ರೀಮ್ ಪೇಪರ್‌ನಲ್ಲಿ ಇಂಗ್ಲೀಷ್‌ನಲ್ಲಿ ಅಥವಾ ಕನ್ನಡದಲ್ಲಿ ಬೆರಳಚ್ಚು ಮಾಡಿರತಕ್ಕದ್ದಾಗಿರಬೇಕು. ವಕಾಲತ್ತುಗಳನ್ನು ಹೊರತುಪಡಿಸಿದ ಇನ್ನಿತರ ದಾಖಲೆಗಳು ಇದ್ದಲ್ಲಿ ಅವುಗಳು 3.0 ಕಿ.ಗ್ರಾಂ.ಗೆ ಕಡಿಮೆಯಿರದ ರೀಮಿನ ಪೇಪರಿನಲ್ಲಿ ಸುತ್ತ ಅಂಚು 6.5 ಸೆಂ.ಮಿ ಅಗಲ ಹಾಗೂ ಒಳ ಅಂಚು 2.5 ಸೆಂ.ಮಿ. ಅಗಲ ಪೇಪರ್ ಬುಕ್‌ನ ಮಾದರಿಯುಳ್ಳ ಪೇಪರಿನಲ್ಲಿ ಬೆರಳಚ್ಚು ಮಾಡಿರತಕ್ಕದ್ದು.

(2) ಎಲ್ಲಾ ವಕಾಲತ್ತುಗಳು ಪಕ್ಷಗಾರರ ಸಹಿ ಮತ್ತು ದಿನಾಂಕವನ್ನೊಳಗೊಂಡಿರತಕ್ಕದ್ದು ಹಾಗೂ ಅದು ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಿದ ದಿನಾಂಕವನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು.

(3) ಎಲ್ಲಾ ದಿನಾಂಕಗಳು, ಮೊತ್ತಗಳು ಹಾಗೂ ಅಂಕಿಗಳನ್ನು ಪದಗಳಲ್ಲಿಯೂ ಹಾಗೂ ಅಂಕಿಗಳಲ್ಲಿ ಬರೆಯತಕ್ಕದ್ದು ಹಾಗೂ ಪದಗಳನ್ನು ಈ ಕೆಳಗೆ ಸೂಚಿಸಿದಂತೆ ಆವರಣದಲ್ಲಿ ಬರೆಯತಕ್ಕದ್ದು.

(ಎ) 7ನೇ ಸೆಪ್ಟೆಂಬರ್ 2011 (ಎರಡು ಸಾವಿರದ ಹನ್ನೊಂದರ ಸೆಪ್ಟೆಂಬರ್‌ನ ಏಳನೆಯ ದಿನ)

(ಬಿ) ರೂ. 10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ)

(4) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಲಾದ ಎಲ್ಲಾ ದಾಖಲೆಗಳು ಬೆರಳಚ್ಚು ಮಾಡಲ್ಪಟ್ಟಿದ್ದು ಪ್ರಮಾಣೀಕರಿಸಲ್ಪಟ್ಟಿರತಕ್ಕದ್ದು.

**ಸೂಚನೆ:** ಬೆರಳಚ್ಚು ಪ್ರತಿಗಳ ದಾಖಲೆಗಳ ಬದಲಾಗಿ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸಲು ಅನುಮತಿಯಿರುತ್ತದೆ. ಪರಂತು ಅವುಗಳು ಸ್ಪಷ್ಟವಾಗಿ ಹಾಗೂ ಸ್ಫುಟವಾಗಿರಬೇಕು.

(5) ದಾಖಲೆಗಳನ್ನು "ನೈಜಪ್ರತಿ"ಯೆಂದು ದೃಢೀಕರಿಸುವ ವ್ಯಕ್ತಿಯು ಅಂತಹ ದಾಖಲೆಗಳನ್ನು ಅವನ ಪೂರ್ಣ ಸಹಿಯೊಂದಿಗೆ ಈ ಕೆಳಗೆ ನಮೂದಿಸಿದ ರೀತಿಯಲ್ಲಿ ಪ್ರಮಾಣೀಕರಿಸಬೇಕು..

"ಇದು ಅರ್ಜಿದಾರ ..........................................................................(ವಕೀಲರ ಹೆಸರು ಬೆರಳಚ್ಚು ಮಾಡಿರಬೇಕು) ಇವರ ಅನುಬಂಧ ........................ ದಲ್ಲಿ ಉಲ್ಲೇಖಿಸಿರುವ ದಾಖಲೆಗಳ ನೈಜ ಪ್ರತಿಯಾಗಿರುತ್ತದೆ. ವಾದಿ(ಗಳ)/ ಪ್ರತಿವಾದಿ(ಗಳ) ವಕೀಲರು.

9. **ದೂರುಗಳ ಪರಿಶೋಧನೆ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲಾದ ಪ್ರತಿಯೊಂದು ದೂರನ್ನು ಕ್ರಮಾಂಕಿಸತಕ್ಕದ್ದು.

(2) ದಾಖಲಿಸುವ ದೂರಿನಲ್ಲಿ ಲೋಪವೇನಾದರೂ ಕಂಡುಬಂದಲ್ಲಿ ಅಂತಹ ಲೋಪಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು ಮತ್ತು ಈ ಲೋಪಗಳನ್ನು ಪಕ್ಷಗಾರನ ಅಥವಾ ಅವನ ಪ್ರತಿನಿಧಿಗಳ ಗಮನಕ್ಕೆ ತಂದು, ಅವುಗಳನ್ನು 15 ದಿನಗಳೊಳಗೆ ಲೋಪಗಳನ್ನು ಸರಿಪಡಿಸಬೇಕೆಂತಲೂ ತಿಳಿಸತಕ್ಕದ್ದು.

(3) ನೀಡಿದ ಗಡುವು ಮೀರಿದ ಮೇಲೆ, ಲೋಪಗಳನ್ನು ಸರಿಪಡಿಸಿದೆಯೇ? ಇಲ್ಲವೇ?ಎಂಬುದನ್ನು ಪರಿಗಣಿಸದೆಯೇ ಅಂತಹ ದೂರುಗಳನ್ನು ಕರ್ನಾಟಕ ರಾಜ್ಯ ಚುನಾವಣಾ ಆಯುಕ್ತರಿಗೆ ಸೂಕ್ತ ಆದೇಶಕ್ಕಾಗಿ ಮಂಡಿಸತಕ್ಕದ್ದು.

**10. ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಎದುರು ವೃತ್ತಿಗಾರರು.–** (1) ಈ ಮುಂದಿನ ಉಪಬಂಧಗಳಿಗೆ ಒಳಪಟ್ಟು, ಯಾವುದೇ ವಕೀಲರಾಗಲೀ ಅಥವಾ ವಕೀಲ ವೃತ್ತಿಗಾರರಾಗಲೀ ಅವರು ಯಾವ ಪಕ್ಷಗಾರನ ಪರವಾಗಿ ವಾದಿಸಲು ಹೊರಟಿರುವರೋ ಅಂತಹವರಿಂದ ಹಾಕಲ್ಪಟ್ಟಿರುವ ಮತ್ತು ಕಾರ್ಯಗತಗೊಳಿಸಿದ ವಕಾಲತ್ತನ್ನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲಿಸದ ಹೊರತು ಅವನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಮುಂದೆ ಯಾವುದೇ ವಿಷಯದಲ್ಲಿ ಹಾಜರಾಗುವುದಕ್ಕಾಗಲೀ ಅಥವಾ ಭಾಗಿಯಾಗುವುದಕ್ಕಾಗಲೀ ಅರ್ಹನಾಗಿರತಕ್ಕದ್ದಲ್ಲ.

(2) ಒಂದು ವೇಳೆ ಒಬ್ಬ ವಕೀಲರು ವಕಾಲತ್ತನ್ನು ಹೂಡಿದ್ದು ತನ್ನ ಕಕ್ಷಿದಾರರ ದಾವೆಯಲ್ಲಿ ಹಾಜರಾಗಲು ಮತ್ತು ವಾದ ಮಂಡಿಸಲು ಆದರೆ ಕಕ್ಷಿದಾರರ ಪರವಾಗಿ ವರ್ತಿಸದೇ ಇರುವಂತಹ ಮತ್ತೊಬ್ಬ ವಕೀಲರನ್ನು ತೊಡಗಿಸಿದ್ದೇ ಆದಲ್ಲಿ ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಹ ವಕೀಲರಿಂದ ವಕಾಲತ್‌ನಾಮ ದಾಖಲಿಸಿಕೊಂಡ ನಂತರ ಅಥವಾ ಹಾಜರಾತಿಗಾಗಿ ನಿವೇದನೆ ಪತ್ರ ಸಲ್ಲಿಸಿದಾಗ ಹಾಜರಾಗಲು ಹಾಗೂ ವಾದಿಸಲು ಅನುಮತಿಯನ್ನು ನೀಡಬಹುದು.

(3) ಈಗಾಗಲೇ ಒಬ್ಬ ವಕೀಲನು ದಾಖಲಾಗಿರುವ ಒಂದು ವ್ಯವಹರಣೆಯಲ್ಲಿ ಬೇರೊಬ್ಬ ವಕೀಲನು ವಕಾಲತ್‌ನಾಮ ಸಲ್ಲಿಸಲು ಇಚ್ಛಿಸಿದಲ್ಲಿ ಈಗಾಗಲೇ ದಾಖಲಾಗಿರುವ ವಕೀಲನಿಂದ ಲಿಖಿತ ಒಪ್ಪಿಗೆ ಪತ್ರ ಅಥವಾ ನಿರಪೇಕ್ಷಣಾ ಪತ್ರ ಹಾಜರುಪಡಿಸದೆ ಅಥವಾ ಒಂದು ವೇಳೆ ಅಂತಹ ಒಪ್ಪಿಗೆ ಪತ್ರ ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಸಲಹೆಗಾರರಿಗೆ ಸಾಕಷ್ಟು ಸತತವಾಗಿ ಸಂಪರ್ಕಿಸಲು ಪ್ರಯತ್ನಿಸಿಯೂ ಪಡೆಯಲಿಕ್ಕೆ ಸಾಧ್ಯವಾಗದ ಕಾರಣಗಳಿಂದಾಗಿ ಅಥವಾ ಇತರ ಯಾವುದೇ ಸದ್ಭಾವನೆಯ ಕಾರಣಗಳಿಂದಾಗಿ ಅಥವಾ ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ವಿಶೇಷ ಅನುಮತಿಯನ್ನು ಪಡೆಯದೇ ಹಾಗೆ ಮಾಡತಕ್ಕದ್ದಲ್ಲ.

(4) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ವಕಾಲತ್‌ನಾಮ ಸಲ್ಲಿಸುವ ಮೊದಲು ವಕೀಲರು ತಮ್ಮ ಸಹಮತಿಯನ್ನು ಅವರ ಸಹಿಯ ಮೇಲು ಭಾಗದಲ್ಲಿ ದಾಖಲಿಸತಕ್ಕದ್ದು ಹಾಗೂ ಅಂಥ ಸಹಮತಿಯ ದಿನಾಂಕವನ್ನು ನಮೂದಿಸತಕ್ಕದ್ದು. ವ್ಯವಹಾರಕ್ಕಾಗಿ ಅವರು ತಮ್ಮ ವಿಳಾಸ ಹಾಗೂ ಟೆಲಿಫೋನಿನ ನಂಬರನ್ನು ಸಹಾ ನಮೂದಿಸತಕ್ಕದ್ದು.

(5) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಅನುಮತಿಗೆ ಒಳಪಟ್ಟು, ಒಬ್ಬ ಪಕ್ಷಗಾರನು ತನ್ನ ಪರವಾಗಿ ಹಾಜರಾಗಲು ಒಬ್ಬ ವಕೀಲರನ್ನು ಗೊತ್ತುಪಡಿಸಿದ್ದಲ್ಲಿ, ಅವನು ತನ್ನಿಂದ ಕಾರ್ಯಗತಗೊಳಿಸಿದ ವಕಾಲತ್ತನ್ನು ಹಿಂತೆಗೆದುಕೊಂಡಲ್ಲದೆ ಅವನು ಸ್ವತಹ ವಿಚಾರಣೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

**11. ವಿಚಾರಣಾವಧಿಯಲ್ಲಿ ಅರ್ಜಿಗಳನ್ನು ಹಾಜರುಪಡಿಸುವ ಕುರಿತಂತೆ ಕಾರ್ಯವಿಧಾನ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಒಪ್ಪಿಸಬೇಕಾದ ಸಂಖ್ಯೆಗಳಷ್ಟು ಅರ್ಜಿಗಳ ಪ್ರತಿಗಳೊಂದಿಗೆ ಅನುಬಂಧವನ್ನೊಳಗೊಂಡ ಒಂದು ಹೆಚ್ಚುವರಿ ಅರ್ಜಿಯ ಪ್ರತಿಯನ್ನು ಸಲ್ಲಿಸತಕ್ಕದ್ದು.

(2) ಯಾವುದೇ ದೂರಿನ ಅರ್ಜಿಯು ಒಂದು ಸಂಘದಿಂದ ಹೂಡಲಾಗಿದೆಯೆಂದು ತೋರಿಬಂದಲ್ಲಿ ಅಂತಹ ಅರ್ಜಿಯನ್ನು ಸಹಿ / ಸಹಿಗಳನ್ನು ಮಾಡುವ ವ್ಯಕ್ತಿ ಅಂದರೆ ಯಾರಿಗೆ ಈ ತೆರನಾದ ಅರ್ಜಿಗಳನ್ನು ಸಹಿಮಾಡುವ ಹಾಗೂ ವಕಾಲತ್ತನ್ನು ಪರಿಶೀಲನೆ ಮಾಡುವ ಅಧಿಕಾರ ನೀಡಲಾಗಿದೆಯೋ ಅವರು ಈ ಅರ್ಜಿಯೊಂದಿಗೆ ಸಂಘದ ಉಪವಿಧಿಯ ಅಥವಾ ನಿಯಮಗಳ ಪ್ರತಿಯನ್ನು ಹಾಗೂ ಹಾಗೆ ಸಹಿ ಮಾಡಲು ಅಧಿಕಾರ ನೀಡಿರುವ ಸಂಘದ ನಿರ್ಣಯದ ಪ್ರತಿಯೊಂದನ್ನು ಸಹಾ ಒಪ್ಪಿಸತಕ್ಕದ್ದು.

**12. ವಿಚಾರಣಾವಧಿಯ ಅರ್ಜಿಗಳಲ್ಲಿರಬೇಕಾದ ವಿವರಗಳು.–** (1) ವಿಚಾರಣಾವಧಿಯ ಅರ್ಜಿಯು ಈ ಕೆಳಕಂಡ ವಿವರಗಳನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಎಲ್ಲಾ ವಿಚಾರಣಾವಧಿಯ ಅರ್ಜಿಗಳು ಅರ್ಜಿದಾರರ / ಗಳ /ಪ್ರತಿವಾದಿ / ಗಳ ಹೆಸರುಗಳನ್ನು ಹೊಂದಿರತಕ್ಕದ್ದು ಹಾಗೂ ಮುಖ್ಯ ಅರ್ಜಿಯಲ್ಲಿ ನಿರ್ದಿಷ್ಟವಾಗಿ ಅವನ / ಅವರ ಶ್ರೇಣಿ ಹಾಗೂ ಸ್ಥಾನಮಾನಗಳನ್ನು ಸ್ಪಷ್ಟವಾಗಿ ನಮೂದಿಸಿರತಕ್ಕದ್ದು;

(ಬಿ) ಒಂದು ವಿಚಾರಣಾವಧಿಯ ಅರ್ಜಿಯಲ್ಲಿ ಕೇವಲ ಒಂದು ಪರಿಹಾರವನ್ನು ಮಾತ್ರ ಕೇಳಲು ಹಕ್ಕುಳ್ಳವರಾಗಿರತಕ್ಕದ್ದು;

(ಸಿ) ಕ್ರಮಬದ್ಧವಾಗಿರುವವೆಂದು ಖಚಿತಪಟ್ಟ ಎಲ್ಲಾ ವಿಚಾರಣಾವಧಿಯ ಅರ್ಜಿಗಳನ್ನು ಪರಿಶೀಲನೆಯ ನಂತರ ಆದೇಶಕ್ಕಾಗಿ ತೀರ್ಮಾನಕ್ಕೆ ಕಾದಿರುವ ಪೀಠದಲ್ಲಿ ಅವುಗಳ ಪಟ್ಟಿ ಮಾಡುವ ಮೊದಲು ಅವುಗಳನ್ನು ಆರ್ಡರ್ ಶೀಟ್‌ನಲ್ಲಿ ' ಐಎ–I' 'ಐಎ–II' ಎಂದು ಕ್ರಮಾಂಕ ನೀಡಿ ದಾಖಲಿಸತಕ್ಕದ್ದು;

(ಡಿ) ವಿಚಾರಣಾವಧಿಯ ಅರ್ಜಿಗಳ ಜೋಡಣೆಯು ಅನುಕ್ರಮನುಸಾರ ಪ್ರಕಾರ ಇರತಕ್ಕದ್ದು ಮತ್ತು ಒಂದು ವೇಳೆ ಇಂತಹ ವಿಚಾರಣಾವಧಿಯ ಅರ್ಜಿಗಳಿಗೆ ಪ್ರತಿವಾದಿಗಳಿಂದ ಆಕ್ಷೇಪಣೆಗಳು ಯಾವುದಾದರೂ ದಾಖಲಾಗಿದ್ದಲ್ಲಿ ಅವುಗಳನ್ನು ಸಂಬಂಧಪಟ್ಟ ವಿಚಾರಣಾವಧಿಯ ಅರ್ಜಿಗಳ ಅಡಿಯಲ್ಲಿ ಇರಿಸಬೇಕು;

(ಇ) ವಿಚಾರಣಾವಧಿಯ ಅರ್ಜಿಯ ಸಂಬಂಧದಲ್ಲಿ ಒಂದು ಆದೇಶ ಹೊರಡಿಸಲಾಗಿದ್ದರೆ, ನ್ಯಾಯಾಲಯದ ಅಧಿಕಾರಿಯು ಅಂತಹ ವಿಚಾರಣಾವಧಿಯ ಅರ್ಜಿಗಳ ಮೇಲೆ ಅದು ವಿಲೇಗೊಂಡ ಕುರಿತಂತೆ "ದಿನಾಂಕ: ..............................ರ ಆದೇಶದ ಅನ್ವಯ ವಿಲೇ ಮಾಡಲಾಗಿದೆ" ಎಂದು ಅದರ ಮೇಲೆ ಟಿಪ್ಪಣಿಯನ್ನು ಬರೆಯತಕ್ಕದ್ದು;

(ಎಫ್) ವಿನಾಯತಿ ಹೊಂದಿರುವ ಸಂದರ್ಭವನ್ನು ಹೊರತುಪಡಿಸಿ, ಉಳಿದ ಯಾವುದೇ ಸಂದರ್ಭದಲ್ಲಿ ವಿಚಾರಣಾವಧಿಯ ಅರ್ಜಿಗಳನ್ನು ನ್ಯಾಯಪೀಠದ ಅನುಮತಿಯಿಲ್ಲದೇ ನ್ಯಾಯಾಂಗಣದಲ್ಲಿ ದಾಖಲಿಸಲು ಅವಕಾಶವಿರತಕ್ಕದ್ದಲ್ಲ.

(ಜಿ) ಒಂದು ವೇಳೆ ಯಾವುದೇ ವಿಚಾರಣಾವಧಿಯ ಅರ್ಜಿಯನ್ನು ನ್ಯಾಯಾಲಯದಲ್ಲಿ ದಾಖಲಿಸಲು ಅನುಮತಿ ನೀಡಲಾಗಿದ್ದಲ್ಲಿ, ಅಂತಹ ವಿಚಾರಣಾವಧಿಯ ಅರ್ಜಿಯ ಕುರಿತಂತೆ ನ್ಯಾಯಾಲಯದ ಅಧಿಕಾರಿಯು ಮೇಲಿನ (ಎ) ಯಿಂದ (ಡಿ)ರವರೆಗಿನ ಖಂಡಗಳಲ್ಲಿ ವಿವರಿಸಿದಂಥ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(2) ವಿಚಾರಣಾವಧಿಯ ಅರ್ಜಿಗಳ ವಿಚಾರಣಾ ಕ್ರಮ:–

(ಎ) ಮೂಲ ಅರ್ಜಿ ಸಲ್ಲಿಸಿದ ನಂತರದಲ್ಲಿ ವಿಚಾರಣಾವಧಿಯ ಅರ್ಜಿಗಳನ್ನು ಸಲ್ಲಿಸಿದ ಪ್ರಕರಣಗಳಲ್ಲಿ ಮತ್ತು ಇದರಿಂದಾಗಿ ಈಗಾಗಲೇ ಪ್ರಕರಣದಲ್ಲಿ ಹಾಜರಾಗಿರುವ ಪಕ್ಷಗಾರರು ಬಾಧಿತರಾಗುವ ಪ್ರಸಂಗ ಏರ್ಪಟ್ಟಲ್ಲಿ, ಅಂತಹ ವಿಚಾರಣಾವಧಿಯ ಅರ್ಜಿಗಳು ವಾದಕ್ಕೆ ಪ್ರವೇಶಿಸಿದ್ದೇ ಆದರೆ ಅಂತಹ ವಿಚಾರಣಾವಧಿಯ ಅರ್ಜಿಗಳಿಗೆ ಸಂಬಂಧಿಸಿದಂತೆ ವಕೀಲರಿಗೆ ಅಥವಾ ಪಕ್ಷಗಾರರಿಗೆ ನೋಟಿಸ್ ಮುಖಾಂತರ ತಿಳಿಸಿ ವಿಚಾರಣಾವಧಿಯ ಅರ್ಜಿಯ ಪ್ರತಿಯನ್ನು ಅವುಗಳ ಅನುಬಂಧವೇನಾದರೂ ಇದ್ದಲ್ಲಿ ಅದರ ಸಹಿತ ಅಂತಹ ಪಕ್ಷಗಾರರಿಂದ ಅಥವಾ ವಕೀಲರಿಂದ ಅಥವಾ ನೋಂದಾಯಿತ ಗುಮಾಸ್ತರಿಂದ ಸ್ವೀಕರಿಸಿದ್ದಕ್ಕೆ ಸಾಕ್ಷ್ಯಿಯಾಗಿ ದಾಖಲೆಯನ್ನು ಪಡೆದು ಈ ಎಲ್ಲದರ ಸಾಕ್ಷ್ಯಾಧಾರಗಳನ್ನು ವಿಚಾರಣಾವಧಿಯ ಅರ್ಜಿಗಳೊಂದಿಗೆ ಹಾಜರುಪಡಿಸದ ಹೊರತು ಅಂತಹ ವಿಚಾರಣಾವಧಿಯ ಅರ್ಜಿಗಳನ್ನು ವಿಚಾರಣೆಗಾಗಿ ನಿಗದಿಪಡಿಸತಕ್ಕದ್ದಲ್ಲ.

(ಬಿ) ಅರ್ಜಿದಾರನಾಗಲಿ ಅಥವಾ ವಕೀಲನಾಗಲೀ ಪ್ರತಿವಾದಿಯು ಅರ್ಜಿಯ ಪ್ರತಿಯನ್ನು ಪಡೆಯಲು ನಿರಾಕರಿಸಿದ ಬಗ್ಗೆ ಅಥವಾ ಸತತ ಪ್ರಯತ್ನದಿಂದಲೂ ನೋಟಿಸನ್ನು ತಲುಪಿಸಲಿಕ್ಕಾಗದ ಬಗ್ಗೆ ಅರ್ಜಿಯ ಮೇಲೆ ಹಿಂಬರಹ ನೀಡಿದರೆ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಹ ವಿಚಾರಣಾವಧಿಯ ಅರ್ಜಿಗಳನ್ನು ಸ್ವೀಕರಿಸಲು ಹಾಗೂ ನೋಂದಾಯಿಸಲು ನಿರ್ದೇಶನ ನೀಡಬಹುದು.

(ಸಿ) ಅಂಥ ಹಿಂಬರಹವು, ಅದನ್ನು ನೀಡಿದ ಹಾಗೂ ತಿರಸ್ಕರಿಸಲಾದ ವೇಳೆ ದಿನಾಂಕ ಹಾಗೂ ಸ್ಥಳದ ವಿವರವನ್ನು ಹೊಂದಿರತಕ್ಕದ್ದು.

(3) ಯಾವ ಪಕ್ಷಗಾರರಿಗೆ ಅರ್ಜಿಯ ನೋಟಿಸು ನೀಡಬೇಕೆಂಬ ವಿಚಾರದಲ್ಲಿ ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಅರ್ಜಿದಾರನು ಅರ್ಜಿ ಸಲ್ಲಿಸದ ಹೊರತು, ಆದೇಶಿಸುವುದೋ ಅಲ್ಲಿಯತನಕ ಅರ್ಜಿದಾರನು ಈ ವಿಚಾರದಲ್ಲಿ ಅಥವಾ ಸೂಕ್ತವಾದ ಮೊತ್ತದ ಸಂಸ್ಕರಣ ವೆಚ್ಚದ ಕೋರ್ಟು ಫೀ ಲೇಬಲ್‌ವುಳ್ಳ ಪತ್ರಗಳು ಅಂಟಿಸುವುದರ ಜೊತೆಯಲ್ಲಿ ಅಷ್ಟೆ ಸಂಖ್ಯೆಯ ಸಾದಾ ಪೇಪರ್‌ನಲ್ಲಿರುವ ನೋಟಿಸು ಜಾರಿ ಮಾಡಬೇಕಾಗಿರುವ ಪಕ್ಷಗಾರರಷ್ಟು ಅರ್ಜಿಯ ಪ್ರತಿಗಳ ಹಾಗೂ ಸಮರ್ಥಿಸುವ ಪ್ರಮಾಣಪತ್ರಗಳು ಅಥವಾ ಅಂಶಗಳ ನಿವೇದನೆ ಪತ್ರಗಳು ಹಾಗೂ ಅನುಬಂಧಗಳು, ಯಾವುದಾದರೂ ಇದ್ದರೆ, ಅವೂ ಹಾಗೂ ಕಛೇರಿಯ ಆಕ್ಷೇಪಣೆಗಳ ಅನುಸರಣೆಯೊಂದಿಗೆ ಜಾರಿ ಮಾಡಬೇಕೆಂದು ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ನಿರ್ದೇಶಿಸಲ್ಪಟ್ಟಿದ್ದ ಹೊರತು, ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಹೊರಡಿಸಲಾದ ಮಧ್ಯಂತರ ಆದೇಶದ ಪ್ರತಿಯನ್ನು ಪ್ರತಿವಾದಿಗಳಿಗೆ ನೋಟಿಸು ಜಾರಿ ಮಾಡುವ ಮುನ್ನ ಅರ್ಜಿದಾರರಿಗಾಗಲೀ ಅಥವಾ ಸಂಬಂಧಿಸಿದ ಪ್ರಾಧಿಕಾರಕ್ಕಾಗಲೀ ನೀಡತಕ್ಕದ್ದಲ್ಲ.

(4) ವಿಚಾರಣಾವಧಿಯ ಅರ್ಜಿಗಳಿಗೆ ನಿಗದಿಪಡಿಸಿರುವ ಫೀಸು, ದೃಢೀಕರಿಸಿದ ಪ್ರತಿಗಳಿಗೆ ಯಾವ ಫೀಸನ್ನು ನಿಗದಿಪಡಿಸಿದೆಯೋ ಅದಕ್ಕೆ ಸಮನಾಗಿ ಇರತಕ್ಕದ್ದು.

**13. ಅಫೀಡವಿಟ್ ಪತ್ರದ ಒಳಾಂಶಗಳು.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಸಲ್ಲಿಸಲಾದ ಪ್ರತಿಯೊಂದು ಅಫೀಡವಿಟ್ ವಿಷಯಗಳ ಅಥವಾ ನಡಾವಳಿಕೆಗಳ ವ್ಯಾಜ್ಯಕಾರಣವನ್ನು ಬಿಂಬಿಸುವಂತಿರತಕ್ಕದ್ದು ಮತ್ತು ವಿಚಾರಣಾವಧಿಯ ಅರ್ಜಿಗಳ ಅಫೀಡವಿಟ್ ಸಹಾ ಇದೇ ರೀತಿ ಇರತಕ್ಕದ್ದು.

(2) ಅಫೀಡವಿಟ್ ಮಾಡುವ ಪ್ರತಿಯೊಬ್ಬ ವ್ಯಕ್ತಿಯು, ತನ್ನನ್ನು ಸ್ಪಷ್ಟವಾಗಿ ಗುರ್ತಿಸಿಕೊಳ್ಳಬಹುದಾದ ರೀತಿಯಲ್ಲಿ ಎಲ್ಲ ಅಗತ್ಯ ವಿವರಗಳನ್ನೊಳಗೊಂಡಿರುವ ತನ್ನ ವಿವರವನ್ನು ವಿವರಿಸತಕ್ಕದ್ದು.

(3) ಒಂದು ಅಫೀಡವಿಟ್ ಹೇಳಿಕೆಗಳ ಅಂಶಗಳ ವಿವರಗಳನ್ನು ಮಾತ್ರ ಒಳಗೊಂಡಿರತಕ್ಕದ್ದು ಮತ್ತು ಅದು ವಾದಗಳಿಂದ ಹೊರತಾಗಿರತಕ್ಕದ್ದು.

(4) ಯಾವುದೇ ಒಂದು ಅಫಿಡವಿಟ್‌ನಲ್ಲಿರುವ ಹೇಳಿಕೆ ಅಂಶಗಳು ಹೇಳಿಕೆ ನೀಡುವವನ ಸ್ವಂತ ತಿಳುವಳಿಕೆಯೊಳಗಿಲ್ಲದೇ ಇದ್ದು ಆದರೆ ಅವನಿಂದ ಸ್ವೀಕೃತಗೊಂಡ ಮಾಹಿತಿಯನ್ನು ಆಧರಿಸಿದ್ದೇ ಆದಲ್ಲಿ, ಅದನ್ನು ಆ ರೀತಿ ತಿಳಿಸತಕ್ಕದ್ದು ಹಾಗೂ ಅದನ್ನೇ ಸತ್ಯವಾಗಿರುವುದೆಂದು ನಂಬಿರುವುದಾಗಿ ವ್ಯಕ್ತಪಡಿಸತಕ್ಕದ್ದು ಹಾಗೂ ಸಾಧ್ಯವಿದ್ದಲ್ಲಿ ಇಂತಹ ಮಾಹಿತಿಗಳ ಮೂಲವನ್ನು ನೀಡುವುದಲ್ಲದೇ ಅಂತಹ ನಂಬಿಕೆಗಳಿಗೆ ಆಧಾರವನ್ನು ಏನಾದರೂ ಇದ್ದಲ್ಲಿ, ನೀಡತಕ್ಕದ್ದು;

(5) ವಿಚಾರಣಾವಧಿಯ ಅರ್ಜಿಗಳೊಂದಿಗೆ ಅನುಬಂಧಗಳೇನಾದರೂ ದಾಖಲು ಮಾಡಲಾಗಿದ್ದಲ್ಲಿ, ಅವುಗಳನ್ನು ಪ್ರಮಾಣೀಕರಿಸತಕ್ಕದ್ದು.

(6) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲು ಮಾಡಲು ಉದ್ದೇಶಿಸಿದ ಅಫೀಡವಿಟ್‌ಗಳು ಪ್ರಮಾಣೀಕರಿಸುವ ಅಧಿಕಾರಿಯ ಮುಂದೆ ಶಪಥವನ್ನು ಮಾಡತಕ್ಕದ್ದು ಮತ್ತು ಅದನ್ನು ಅವರು ದೃಢೀಕರಿಸತಕ್ಕದ್ದು.

**ಸೂಚನೆ:–** ಯಾವೊಬ್ಬ ವ್ಯಕ್ತಿಯನ್ನು ಈ ನಿಯಮಗಳ ಅಡಿ ಈ ಉದ್ದೇಶಕ್ಕಾಗಿ ಯಾವುದೇ ಕಾನೂನಿನ್ವಯ ಪ್ರಮಾಣ ವಚನವನ್ನು ಬೋಧನೆ ಮಾಡಲು ಪ್ರಾಧೀಕರಿಸಲ್ಪಟ್ಟಿರುತ್ತಾನೋ ಅವನನ್ನು ದೃಢೀಕರಿಸುವ ಅಧಿಕಾರಿಯೆಂದು ಪರಿಗಣಿಸತಕ್ಕದ್ದು.

**14. ಅಫೀಡವಿಟ್‌ನ್ನು ಸಲ್ಲಿಸುವ ಕಾರ್ಯವಿಧಾನ.–** (1) ಹೇಳಿಕೆ ನೀಡುವವನು ಒಂದು ಅಫೀಡವಿಟ್‌ನಲ್ಲಿ ಪ್ರತಿಯೊಂದು ಹಾಳೆಯಡಿಯಲ್ಲಿ ಹಾಗೂ ಅಫೀಡವಿಟ್‌ನ ಕೊನೆಯಲ್ಲಿ ಸಹಿ ಅಥವಾ ಅವನ ಚಿಹ್ನೆ ನಮೂದಿಸಿರತಕ್ಕದ್ದು.

(2) ದೃಢೀಕರಿಸುವ ಅಧಿಕಾರಿಯು, ಪ್ರತಿಯೊಂದು ತಿದ್ದುಪಡಿ, ಮಾರ್ಪಾಡು ಅಥವಾ ಸಾಲುಗಳ ನಡುವೆ ಸೇರಿಸಿರುವುದನ್ನು ಅದರ ಪಕ್ಕದಲ್ಲಿ ಕಿರು ಸಹಿ ಹಾಕಿ ಅಧಿಕೃತಗೊಳಿಸತಕ್ಕದ್ದು ಹಾಗೂ ಪ್ರತಿಯೊಂದು ಹಾಳೆಯ ಅಡಿಯಲ್ಲಿ ಹೀಗೆ ಅಧಿಕೃತಗೊಳಿಸಿದ ತಿದ್ದುಪಡಿ ಮುಂತಾದವುಗಳ ಸಂಖ್ಯೆಯನ್ನು ನಮೂದಿಸತಕ್ಕದ್ದು ಅಥವಾ ಏನೂ ಇರದ ಪಕ್ಷದಲ್ಲಿ " ಶೂನ್ಯ " ಎಂದು ನಮೂದಿಸಿ ಇದಕ್ಕೆ ಕಿರುಸಹಿಯನ್ನು ಮಾಡತಕ್ಕದ್ದು ಮತ್ತು ಅಫೀಡವಿಟ್‌ನ ಅಡಿಯಲ್ಲಿ ತನ್ನ ಹುದ್ದೆ, ದಿನಾಂಕವನ್ನು ನಮೂದಿಸಿ ಸಹಿ ಮಾಡಿ ತನ್ನ ಅಧಿಕೃತ ಮೊಹರು ಅಥವಾ ಕಛೇರಿಯ ಮೊಹರನ್ನು ಹಾಕಿರತಕ್ಕದ್ದು.

(3) ದೃಢೀಕರಿಸುವ ಅಧಿಕಾರಿಯು, ತನ್ನ ಸಮಕ್ಷಮದಲ್ಲಿ ಪ್ರಮಾಣ ವಚನವನ್ನು ವಿದ್ಯುಕ್ತವಾಗಿ ಮಾಡಿಸಿರುವ ಅಥವಾ ಸ್ಥಾಪಿಸಿರುವ ಅಂಶವನ್ನು ನಮೂದಿಸಿ ತದನಂತರ ಸಹಿ ಹಾಕತಕ್ಕದ್ದು.

(4) ದೃಢೀಕರಿಸುವ ಅಧಿಕಾರಿಗೆ ಹೇಳಿಕೆ ನೀಡುವವನ ವೈಯಕ್ತಿಕ ಪರಿಚಯವಿರದ ಪಕ್ಷದಲ್ಲಿ, ದೃಢೀಕರಿಸುವ ಅಧಿಕಾರಿಗೆ ಪರಿಚಯವಿರುವ ಓರ್ವ ವ್ಯಕ್ತಿಯಿಂದ ಪರಿಚಯಿಸಿಕೊಳ್ಳಲ್ಪಡತಕ್ಕದ್ದು ಮತ್ತು ಹಾಗೆ ಪರಿಚಯಿಸಿಕೊಂಡಿರುವ ಅಂಶವನ್ನು ಪ್ರತಿಯೊಂದು ಅಫೀಡವಿಟ್‌ನ ಕೊನೆಯಲ್ಲಿ ಪರಿಚಯಿಸಿದ

ವ್ಯಕ್ತಿಯ ಹೆಸರು ಹಾಗೂ ವಿವರಣೆಯನ್ನು ನಮೂದಿಸತಕ್ಕದ್ದು. ಅಂತಹ ವ್ಯಕ್ತಿಯ ಸಹಿಯನ್ನು ದೃಢೀಕರಿಸತಕ್ಕದ್ದು. ದೃಢೀಕರಿಸುವ ಅಧಿಕಾರಿಗೆ ಹೇಳಿಕೆ ನೀಡುವವನು ಪರಿಚಯವಿಲ್ಲದ ಸಂದರ್ಭದಲ್ಲಿ, ಅಂತಹ ರೀತಿಯಲ್ಲಿ ಗುರುತಿಸಿಕೊಳ್ಳಲು ಸಾಧ್ಯವಾಗದೇ ಇದ್ದಲ್ಲಿ, ಹೇಳಿಕೆ ನೀಡುವವನ ಎಡ ಹೆಬ್ಬೆಟ್ಟಿನ ಗುರುತನ್ನು ಅಫೀಡವಿಟ್‌ನ ಕೊನೆಯಲ್ಲಿ ಪಡೆದುಕೊಂಡು ಇದನ್ನು ಧೃಢೀಕರಿಸುವ ಅಧಿಕಾರಿಯು ಈ ಹೆಬ್ಬೆಟ್ಟಿನ ಗುರುತನ್ನು ತನ್ನ ಸಮಕ್ಷಮದಲ್ಲಿ ಹಾಜರಾಗಿರುವ ಅಂತಹ ವ್ಯಕ್ತಿಯ ಎಡ ಹೆಬ್ಬೆಟ್ಟಿನ ಗುರುತಾಗಿರುತ್ತದೆಂದು ದೃಢಪಡಿಸತಕ್ಕದ್ದು.

(5) ಹೇಳಿಕೆದಾರರು ಅನಕ್ಷರಸ್ಥರಾಗಿದಲ್ಲಿ ಅಥವಾ ಅಂಧರಾಗಿದ್ದಲ್ಲಿ ಅಥವಾ ಅಫೀಡವಿಟ್‌ನಲ್ಲಿ ಮಾಡಿದ ಅಥವಾ ಬರೆದ ಭಾಷೆಯು ಗೊತ್ತಿರದ ಪಕ್ಷದಲ್ಲಿ, ಅಂತಹ ಹೇಳಿಕೆದಾರರಿಗೆ ಅಫಿಡವಿಟ್‌ನ್ನು ದೃಢೀಕೃತ ಅಧಿಕಾರಿಯ ಸಮಕ್ಷಮದಲ್ಲಿ ಅವನಿಗೆ ಗೊತ್ತಿರುವ ಭಾಷೆಯಲ್ಲಿ ಓದಿ ವಿವರಿಸಿ ತಿಳಿಸತಕ್ಕದ್ದು ಹಾಗೂ ದೃಢೀಕೃತ ಅಧಿಕಾರಿಯು ಈ ವಿಚಾರವನ್ನು ಈ ರೀತಿ ತನ್ನ ಸಮಕ್ಷಮ ತಿಳಿಸಿರುವ ಬಗ್ಗೆ ಹಾಗೂ ಹೇಳಿಕೆದಾರನು ಅದನ್ನು ಅರ್ಥ ಮಾಡಿಕೊಂಡು ದೃಢೀಕೃತ ಅಧಿಕಾರಿಯ ಸಮಕ್ಷಮದಲ್ಲಿಯೇ ತನ್ನ ಸಹಿ ಮಾಡಿರುವನೆಂತಲೂ ಅಥವಾ ತನ್ನ ಗುರುತನ್ನು ಮಾಡಿರುವನೆಂತಲೂ ದೃಢೀಕರಿಸತಕ್ಕದ್ದು.

(6) ಅಫೀಡವಿಟ್‌ನಲ್ಲಿ ಉಲ್ಲೇಖಿಸಿದ ಮತ್ತು ಜೊತೆಗೆ ಸಲ್ಲಿಸಲಾಗಿದ್ದ ಯಾವುದೇ ದಾಖಲೆಗಳನ್ನು ದೃಢೀಕರಿಸುವ ಅಧಿಕಾರಿಯು, ಈ ಕೆಳಗೆ ನಮೂದಿಸಿರುವಂತೆ ಹಿಂಬರಹದೊಂದಿಗೆ ತನ್ನ ಸಹಿಯನ್ನು ಮಾಡತಕ್ಕದ್ದು:–

"ಈ ದಿನ ................... ರಂದು ............................. ಅಫಿದಾವಿತ್ತಿನಲ್ಲಿ ದಾಖಲೆ ಪ್ರದರ್ಶಕ .................. ಎಂದು ಉಲ್ಲೇಖಿಸಿರುವ ಈ ದಾಖಲೆಗಳು ನನ್ನ ಸಮಕ್ಷಮದಲ್ಲಿ ಪ್ರಮಾಣೀಕರಿಸಲಾಗಿದೆ/ ಸ್ಥಿರಪಡಿಸಲಾಗಿದೆ."

**15. ನೋಟಿಸನ್ನು ಜಾರಿಗೊಳಿಸುವಿಕೆ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ದೂರುಗಳಿಗೆ ಸಂಬಂಧಿಸಿದಂತೆ ಪಕ್ಷಕಾರನಿಗೆ (ರಿಗೆ)/ ಪ್ರತಿವಾದಿ (ಗಳಿಗೆ) ನೋಟಿಸು ಜಾರಿಗೊಳಿಸಲು ನಿರ್ದೇಶಿಸಿದಲ್ಲಿ, ಅಂತಹ ನೋಟಿಸನ್ನು ಸಾಮಾನ್ಯವಾಗಿ 15 ದಿವಸಗಳ ಅವಧಿಗಾಗಿ ಅಥವಾ ಸಂದರ್ಭಗಳನ್ನು ಅವಲಂಬಿಸಿ 15 ದಿನಗಳಿಗಿಂತ ಕಡಿಮೆಯ ಅವಧಿಗಾಗಿ ಜಾರಿಗೊಳಿಸತಕ್ಕದ್ದು.

(2) ನೋಟಿಸು ನೀಡಲು 15 ದಿನಗಳ ಗಡುವನ್ನು ನೀಡುವ ಕುರಿತಂತೆ ಅನುಮಾನಗಳು ಉದ್ಭವಿಸುವ ಸಂದರ್ಭಗಳಿದ್ದಾಗ ಅದನ್ನು ಅಗತ್ಯಪಡಿಸತಕ್ಕದ್ದು.

(3) ನೋಟಿಸಿನೊಂದಿಗೆ ದಾಖಲಾಗಿರುವ ದೂರಿನ ಪ್ರತಿಗಳು, ಅರ್ಜಿಗಳನ್ನು ಆಧರಿಸಿದ ನಿವೇದನೆ ಪತ್ರಗಳು ಹಾಗೂ ಇನ್ನಿತರೆ ದಾಖಲೆಗಳನ್ನು ಎದುರು ಪಕ್ಷಕಾರ(ರು)/ ಪ್ರತಿವಾದಿ(ಗಳಿಗೆ) ಜಾರಿಗೊಳಿಸತಕ್ಕದ್ದು.

(4) ಎದುರು ಪಕ್ಷಕಾರ(ರು) / ಪ್ರತಿವಾದಿ (ಗಳು) ಹಾಜರಾದ ತರುವಾಯ, ಯಾವುದೇ ಅರ್ಜಿ ಅಥವಾ ದಾಖಲೆಗಳನ್ನು ರಾಜ್ಯ ಚುನಾವಣಾ ಆಯೋಗದಿಂದ ಸ್ವೀಕರಿಸತಕ್ಕದ್ದಲ್ಲ.ಎದುರು ಪಕ್ಷದ ಪಕ್ಷಗಾರರಿಗೆ ಅದರ ಒಂದು ಪ್ರತಿಯನ್ನು ಜಾರಿಗೊಳಿಸಲಾಗಿದೆ ಎಂಬ ಹಿಂಬರಹವನ್ನು ಹೊಂದಿಲ್ಲದೆ ಇದ್ದಲ್ಲಿ ಸ್ವೀಕರಿಸತಕ್ಕದ್ದಲ್ಲ.

**16. ಪಕ್ಷಗಾರರ ಹಾಜರಾತಿ ಹಾಗೂ ಹಾಜರಾಗದೇ ಇರುವುದರ ಪರಿಣಾಮಗಳು.–** (1) ಪ್ರಕರಣದ ವಿಚಾರಣೆಯ ದಿನಾಂಕದಂದು ಅಥವಾ ವಿಚಾರಣೆಯನ್ನು ಮುಂದೂಡಲ್ಪಡಬಹುದಾದ ಯಾವುದೇ ದಿನಾಂಕದಂದು, ಪ್ರಕರಣವನ್ನು ವಿಚಾರಣೆಗಾಗಿ ಕರೆದಾಗ ಅರ್ಜಿದಾರನು ಸ್ವತಃ ಅಥವಾ ವಕೀಲರ ಮೂಲಕವಾಗಲೀ ವಿಚಾರಣೆಗೆ ಹಾಜರಾಗದೇ ಇದ್ದ ಪಕ್ಷದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಈ ತಪ್ಪಿಗಾಗಿ ಅರ್ಜಿಯನ್ನು ಅಥವಾ ಸಂದರ್ಭಾನುಸಾರವಾಗಿ ಅಪೀಲೆಂದು ಭಾವಿಸಲಾದದ್ದನ್ನು ವಜಾ ಮಾಡಬಹುದು.

(2) ಪ್ರಕರಣದ ವಿಚಾರಣೆಯ ದಿನಾಂಕದಂದು ಅಥವಾ ವಿಚಾರಣೆ ದಿನಾಂಕವು ಮುಂದೂಡಲ್ಪಡಬಹುದಾದ ಯಾವುದೇ ದಿನಾಂಕದಂದು ಪ್ರಕರಣವನ್ನು ವಿಚಾರಣೆಗೆ ಕರೆದಾಗ ಪ್ರತಿವಾದಿ ಸ್ವತಹವಾಗಲೀ ಅಥವಾ ವಕೀಲರ ಮೂಲಕವಾಗಲೀ ಹಾಜರಾಗದೇ ಇದ್ದ ಪಕ್ಷದಲ್ಲಿ, ರಾಜ್ಯ ಚುನಾವಣಾ ಆಯುಕ್ತರು ಅರ್ಜಿದಾರ ಅಥವಾ ಅವನ ವಕೀಲನ ಅಹವಾಲನ್ನು ಕೇಳಿದ ತರುವಾಯ ಇಂತಹ ಪ್ರಕರಣಗಳ ಕುರಿತಂತೆ ಯೋಗ್ಯತಾನುಸಾರ ನಿರ್ಣಯಿಸಿ ನಿರ್ಧಾರ ತೆಗೆದುಕೊಳ್ಳಬಹುದು.

(3) ಯಾವುದೇ ಪ್ರಕರಣವು ತಪ್ಪಿಗಾಗಿ ವಜಾ ಮಾಡಲ್ಪಟ್ಟಾಗ, ಅರ್ಜಿದಾರನು ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬೇರೊಂದು ಸಂಕೀರ್ಣ ಅರ್ಜಿಯನ್ನು ಒಂದು ಅಫಿದಾವತ್ತಿನೊಂದಿಗೆ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಬಹುದು ಮತ್ತು ಪ್ರಕರಣವನ್ನು ವಿಚಾರಣೆಗೆ ಕರೆದ ದಿನದಂದು ಅವನ ಹಾಜರಾತಿಯು ಸಕಾರಣಕ್ಕಾಗಿ ತಡೆ ಉಂಟಾಗಿದೆಯೆಂದು ಸಾಕ್ಷಾಧಾರಗಳಿಂದ ರುಜುವಾತುಪಡಿಸಿದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಪ್ರಕರಣದ ವೆಚ್ಚಕ್ಕೆ ಸಂಬಂಧಿಸಿದಂತೆ ಅಂತಹ ನಿಬಂಧನೆಗೊಳಪಟ್ಟು ಪ್ರಕರಣಗಳನ್ನು ಪೂರ್ವಸ್ಥಿತಿಗೆ ತರಬಹುದು ಅಥವಾ ತಾನು ಸೂಕ್ತವೆಂದು ಭಾವಿಸಿದಂತೆ ತೀರ್ಮಾನಿಸಬಹುದು:

ಪರಂತು, ಒಂದು ವೇಳೆ ಪ್ರಕರಣದಲ್ಲಿ ಪ್ರತಿವಾದಿಯು ಈಗಾಗಲೇ ಹಾಜರಾಗಿದ್ದಲ್ಲಿ ಪೂರ್ವಸ್ಥಿತಿಗೆ ತರುವ ಮೊದಲು ಪ್ರತಿವಾದಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡತಕ್ಕದ್ದು:

ಮತ್ತು ಪರಂತು, ಅರ್ಜಿದಾರನು ಸಕಾಲದಲ್ಲಿ ಅರ್ಜಿಯನ್ನು ಸಲ್ಲಿಸದೇ ಇರುವುದಕ್ಕೆ ಸಾಕಷ್ಟು ಕಾರಣವುಳ್ಳವನಾಗಿದ್ದಾನೆಂದು ರಾಜ್ಯ ಚುನಾವಣಾ ಆಯುಕ್ತರು ಮನಗಂಡರೆ, ಈ ಹಿಂದೆ ಹೇಳಿದ 60 ದಿನಗಳ ಅವಧಿ ಮುಗಿದ ನಂತರದ ದಿನಾಂಕದಿಂದ 30 ದಿನಗಳ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸಿದಾಗ ಅಂತಹ ಅರ್ಜಿಯನ್ನು ಪರಿಶೀಲನೆಗೆ ಸ್ವೀಕರಿಸಬಹುದು.

(4) ಒಂದು ಪ್ರಕರಣವು ಏಕಪಕ್ಷೀಯವಾಗಿ ವಿಚಾರಣೆಯಾಗಿದ್ದು, (2)ನೇ ಉಪ ನಿಯಮದ ಅಡಿಯಲ್ಲಿ ಪ್ರತಿವಾದಿ / ಗಳಿಗೆ ವಿರುದ್ಧವಾಗಿ ಆದೇಶವನ್ನು ಘೋಷಿಸಲ್ಪಟ್ಟಿದ್ದರೆ, ಆ ಆದೇಶದ ದಿನಾಂಕದಿಂದ 30 ದಿನಗಳೊಳಗಾಗಿ ಒಂದು ಅಫಿದಾವಿತ್ತಿನ ಜೊತೆಗೆ ಪ್ರತಿವಾದಿಯು ರಾಜ್ಯ ಚುನಾವಣಾ ಆಯೋಗಕ್ಕೆ ಒಂದು ಸಂಕೀರ್ಣ ಅರ್ಜಿಯನ್ನು ಸಲ್ಲಿಸಬಹುದು ಮತ್ತು ನೋಟಿಸು ಜಾರಿಯಾಗಿರುವುದಿಲ್ಲವೆಂತಲೂ ಅಥವಾ ಪ್ರಕರಣವನ್ನು ವಿಚಾರಣೆಗೆ ಕರೆದಾಗ ಹಾಜರಾಗಲು ಅವನು ಸಾಕಷ್ಟು ಕಾರಣಗಳಿಂದಾಗಿ ತಡೆಹಿಡಿಯಲ್ಪಟ್ಟಿದ್ದನೆಂತಲೂ ರಾಜ್ಯ ಚುನಾವಣಾ ಆಯುಕ್ತರಿಗೆ ಪ್ರತಿವಾದಿಯು ಮನವರಿಕೆ ಮಾಡಿದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿ ಪ್ರಕರಣದ ವೆಚ್ಚಕ್ಕೆ ಸಂಬಂಧಿಸಿದಂತೆ ಅಂತಹ ನಿಬಂಧನೆಗೊಳಪಟ್ಟು ಅಥವಾ ತಾನು ಸೂಕ್ತವೆಂದು ಭಾವಿಸಿದಂತೆ ಪ್ರಕರಣವನ್ನು ಪುನರ್ ವಿಚಾರಣೆ ಮಾಡಬಹುದು:

ಮತ್ತು ಪರಂತು, ಅರ್ಜಿದಾರನು ಸಕಾಲದಲ್ಲಿ ಅರ್ಜಿಯನ್ನು ಸಲ್ಲಿಸದೇ ಇರುವುದಕ್ಕೆ ಸಾಕಷ್ಟು ಕಾರಣವುಳ್ಳವನಾಗಿದ್ದಾನೆಂದು ರಾಜ್ಯ ಚುನಾವಣಾ ಆಯುಕ್ತರು ಮನಗಂಡರೆ, ಈ ಹಿಂದೆ ಹೇಳಿದ 60 ದಿನಗಳ ಅವಧಿ ಮುಗಿದ ನಂತರದ ದಿನಾಂಕದಿಂದ 30 ದಿನಗಳ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸಿದಾಗ ಅಂತಹ ಅರ್ಜಿಯನ್ನು ಪರಿಶೀಲನೆಗೆ ಸ್ವೀಕರಿಸಬಹುದು.

(5) ರಾಜ್ಯ ಚುನಾವಣಾ ಆಯೋಗದ ಮುಂದಿರುವ ವ್ಯವಹರಣೆಗಳಿಗೆ ಕಾಲಪರಿಮಿತಿ ಅವಧಿನಿಯಮ, 1963ರ ಉಪಬಂಧಗಳು ಅನ್ವಯಿಸುವುದಿಲ್ಲ.

**17. ಮುಂದೂಡುವಿಕೆ.–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಮುಂದಿರುವ ಪ್ರತಿಯೊಂದು ವ್ಯವಹರಣೆಗಳನ್ನು ಸಾಧ್ಯವಾದಷ್ಟು ಬೇಗನೆ ಮತ್ತು ಅಧಿನಿಯಮದಲ್ಲಿ ಅಗತ್ಯಪಡಿಸಿದಂತೆ ನಡೆಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು, ತನ್ನಿಂದ ಯಾವುದೇ ವಿಚಾರಣೆಯು ಮುಂದೂಡುವಿಕೆಯಾದಲ್ಲಿ ಅದಕ್ಕೆ ಕಾರಣಗಳನ್ನು ದಾಖಲಿಸತಕ್ಕದ್ದು.

(3) ದೂರುದಾರರು ಅಥವಾ ಸಂದರ್ಭಾನುಸಾರವಾಗಿ ಅರ್ಜಿದಾರರು ಸಕಾರಣ ನೀಡಿರದ ಹೊರತು ಪ್ರಕರಣದ ಮುಂದೂಡಿಕೆಗಾಗಿ ಬೇಡಿಕೆ ಸಲ್ಲಿಸಿದರೆ ವೆಚ್ಚದ ಹೊರೆಯನ್ನು ಭರಿಸಲು ಹೊಣೆಗಾರರಾಗಿರತಕ್ಕದ್ದು:

ಪರಂತು, ಒಂದು ನಿರ್ದಿಷ್ಟ ಪ್ರಕರಣದಲ್ಲಿ ಪರಿಸ್ಥಿತಿಗನುಸಾರವಾಗಿ ನಿಯಮಗಳಂತೆ ಅರ್ಹವಿರುವ ಪ್ರಯಾಣದ ಭತ್ಯೆ ಹಾಗೂ ದಿನಭತ್ಯೆಯ ನಿಜವಾದ ವೆಚ್ಚವನ್ನು ಆದರೆ ಯಾವುದೇ ಸಂದರ್ಭದಲ್ಲಿ ನೂರು ರೂಪಾಯಿಗಳಿಗಿಂತಲೂ ಕಡಿಮೆಯಿರದ ಮೊತ್ತದಷ್ಟು ಮೊತ್ತವನ್ನು ವೆಚ್ಚವೆಂದು ವಿಧಿಸಬಹುದಾಗಿರುತ್ತದೆ.

(4) ವಿಧಿಸಲಾದ ವೆಚ್ಚದ ಮೊತ್ತವನ್ನು ಪಕ್ಷಗಾರ ಅಥವಾ ಪಕ್ಷಗಾರರಿಗೆ ಅವನ ಅಥವಾ ಅವರ ವೆಚ್ಚವನ್ನು ಭರಿಸಲು ನೀಡಬಹುದು ಅಥವಾ ರಾಜ್ಯ ಸರ್ಕಾರದ ಸ್ವೀಕೃತಿ ಶೀರ್ಷಿಕೆಯಲ್ಲಿ ಜಮಾ ಮಾಡತಕ್ಕದ್ದು.

(5) ವೆಚ್ಚವನ್ನು ನಿಗದಿಪಡಿಸದೇ ಯಾವುದೇ ಮುಂದೂಡುವಿಕೆಯನ್ನು ಮಂಜೂರು ಮಾಡಲಾಗಿದ್ದರೆ, ಆದೇಶದ ಹಾಳೆಯಲ್ಲಿ ಈ ಕಾರಣ ನಮೂದಿಸಿರತಕ್ಕದ್ದು.

(6) ಪ್ರಕರಣದ ಮುಂದೂಡುವಿಕೆಯ ಎಲ್ಲಾ ಆದೇಶಗಳು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆಯುಕ್ತರಿಂದ ಸಹಿ ಮಾಡಲ್ಪಟ್ಟಿರತಕ್ಕದ್ದು.

(7) ಪಕ್ಷಗಾರರ / ರನ್ನು ಪ್ರತಿನಿಧಿಸುವ ವಕೀಲರ ಗೈರು ಹಾಜರಿ ವಕೀಲರ ಹಿಡಿತಕ್ಕೆ ಮೀರಿದ (ಅಂದರೆ) ಅವರ ಅನಾರೋಗ್ಯ ಅಥವಾ ಕುಟುಂಬದಲ್ಲಿಯ ಅಗಲಿಕೆಯ ಕಾರಣಕ್ಕಾಗಿ ಮಾತ್ರವಲ್ಲದ ಹೊರತು, ವಕೀಲರು ಲಭ್ಯವಿಲ್ಲವೆಂಬ ಕಾರಣವು ಪ್ರಕರಣದ ಮುಂದೂಡಿಕೆ ಮಾಡಲು ಕಾರಣವಾಗಿರತಕ್ಕದ್ದಲ್ಲ.

**18. ವಾದಗಳು.–** (1) ವಿವಾದಾಂಶಕ್ಕೆ ಸಂಬಂಧಿಸಿದ ವಾದಗಳು ವಿಷಯಕ್ಕೆ ಸಂಬಂಧಿಸಿದಂತೆ ಎಷ್ಟು ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿರತಕ್ಕದ್ದು.

(2) ಒಬ್ಬ ಪಕ್ಷಗಾರನು ವಕೀಲನಿಂದ ಪ್ರತಿನಿಧಿಸಲ್ಪಡುತ್ತಿದ್ದಲ್ಲಿ, ವಿಷಯವನ್ನು ವಾದಗಳಿಗೆ ನಿಗದಿಪಡಿಸಿದ ಎರಡು ದಿನಗಳ ಮೊದಲು ಒಂದು ಸಂಕ್ಷಿಪ್ತ ಲಿಖಿತ ವಾದವನ್ನು ದಾಖಲಿಸುವುದು ಕಡ್ಡಾಯವಾಗಿರತಕ್ಕದ್ದು.

(3) ಸಂಕ್ಷಿಪ್ತ ಲಿಖಿತ ವಾದಗಳನ್ನು ದಾಖಲು ಮಾಡಲು ತಪ್ಪಿದರೆ, ಮುಂದೂಡುವಿಕೆ ಮಂಜೂರು ಮಾಡಲು ಯಾವ ವೆಚ್ಚವನ್ನು ವಿಧಿಸಲಾಗುವುದೋ ಅದೇ ದರದಲ್ಲಿರುವ ವೆಚ್ಚವನ್ನು ವಿಧಿಸತಕ್ಕದ್ದು.

**19. ಏಕಪಕ್ಷೀಯ ಮಧ್ಯಂತರ ಆದೇಶ.–** ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಹೊರಡಿಸಿದ ಯಾವುದೇ ಏಕಪಕ್ಷೀಯ ಮಧ್ಯಂತರ ಆದೇಶವು ಏತನ್ಮಧ್ಯೆ ಮಧ್ಯಂತರ ಆದೇಶಕ್ಕೆ ಬಂದ ಆಕ್ಷೇಪಣೆಗಳ ವಿಚಾರಣೆ ಹಾಗೂ ವಿಲೇಯಾಗದೇ ಇದ್ದಲ್ಲಿ 45 ದಿನಗಳ ತರುವಾಯ ರದ್ದಾಗತಕ್ಕದ್ದು.

**20. ನ್ಯಾಯಾಲಯದ ಡೈರಿ ಹಾಗೂ ರಿಜಿಸ್ಟರುಗಳ ನಿರ್ವಹಣೆ.–** (1) (i) ನ್ಯಾಯಾಲಯದ ಅಧಿಕಾರಿಯು, ಪ್ರಕರಣದ ಮುಂದೂಡಿಕೆಯಾಗಿದೆಯೇ ಅಥವಾ ಭಾಗಶ: ವಿಚಾರಣೆಯಾಗಿದೆಯೇ ಅಥವಾ ವಿಚಾರಣೆಯಾಗಿ ವಿಲೇಯಾಗಿದೆಯೇ? ಅಥವಾ ಸಂದರ್ಭಾನುಸಾರವಾಗಿ ವಿಚಾರಣೆಯಾಗಿದ್ದು ಆದೇಶಕ್ಕಾಗಿ ಕಾದಿರಿಸಲಾಗಿದೆಯೇ ಎನ್ನುವ ಬಗ್ಗೆ ಸಂಕ್ಷಿಪ್ತ ದಾಖಲೆಗಳನ್ನೊಳಗೊಂಡಂತೆ ಸ್ಪಷ್ಟವಾಗಿ ಓದಲು ಬರುವಂತೆ ರಿಜಿಸ್ಟರ್‌ವೊಂದರಲ್ಲಿ ನ್ಯಾಯಾಲಯದ ಡೈರಿಯಲ್ಲಿ ನಮೂದಿಸಿರತಕ್ಕದ್ದು ಮತ್ತು ಅವನಿಂದ ಅದಕ್ಕೆ ಸಹಿ ಹಾಕತಕ್ಕದ್ದು.

(ii) ಕಛೇರಿ ವೇಳೆಯಲ್ಲಿ ನ್ಯಾಯಾಲಯದ ಡೈರಿಯು ಸಾರ್ವಜನಿಕರ ಪರಿವೀಕ್ಷಣೆಗೆ ಮುಕ್ತವಾಗಿರತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ತೀರ್ಪು / ಆದೇಶವು ಘೋಷಿಸಿದ ತರುವಾಯ ಅರ್ಜಿಯು ವಿಲೇಗೊಂಡಿರುವ ಬಗ್ಗೆ ಸಂಬಂಧಪಟ್ಟ ನ್ಯಾಯಾಲಯದ ಅಧಿಕಾರಿಯು ರಿಜಿಸ್ಟರಿನಲ್ಲಿ ನಮೂದು ಮಾಡತಕ್ಕದ್ದು.

**21. ವೆಚ್ಚಗಳು.–** ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅನ್ಯಥಾ ಆದೇಶಿಸಿದ ಹೊರತು, ವೆಚ್ಚಗಳು ಎಂದರೆ:–

ಎ) (i) ವಕಾಲತ್ತುಗಳಿಗೆ;

(ii) ವಕಾಲತ್ತಿನೊಂದಿಗೆ ಹಾಜರುಪಡಿಸತಕ್ಕ ಮತ್ತು ಪಕ್ಷಗಾರರಿಂದ ಹಾಜರುಪಡಿಸಿದ ದಾಖಲೆಗಳಿಗೆ;

(iii) ಪಕ್ಷಗಾರರ ಪರವಾಗಿ ದಾಖಲು ಮಾಡುವ ವಕಾಲತ್ತುಗಳಿಗೆ (ಒಬ್ಬ ಪಕ್ಷಗಾರನ ಪರವಾಗಿ ಒಂದಕ್ಕಿಂತಲೂ ಹೆಚ್ಚಿನ ವಕಾಲತ್ತುಗಳು ದಾಖಲೆಗೊಂಡಿದ್ದರೆ ಒಂದು ವಕಾಲತ್ತಿನ ಬಗ್ಗೆ ಮಾತ್ರ ನ್ಯಾಯಾಲಯದ ಶುಲ್ಕವನ್ನು ಸಲ್ಲಿಸಿದ್ದರೆ);

(iv) ಪಕ್ಷಗಾರನ ಸೂಚನೆಯ ಮೇರೆಗೆ ಕೈಗೊಂಡ ಕಾನೂನು ಕ್ರಮಕ್ಕೆ;

(v) ಪಕ್ಷಗಾರನಿಂದ ದಾಖಲು ಮಾಡಲ್ಪಟ್ಟ ದೃಢೀಕರಿಸಿದ ಪ್ರತಿಗಳು ಮತ್ತು ಯಾವುದು ವ್ಯಾಜ್ಯಗಳ ತೀರ್ಮ ನೀಡಿಕೆಗೆ ಅಗತ್ಯವಾಗಿರುತ್ತದೋ ಅಂತಹುವುಗಳಿಗೆ,

–ಪಾವತಿಸಲಾದ ನ್ಯಾಯಾಲಯದ ಶುಲ್ಕ,

(ಬಿ) ದೃಢೀಕೃತ ಪ್ರತಿಗಳನ್ನು ಪಡೆಯುವ ವೆಚ್ಚ;

(ಸಿ) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ಸಾಕ್ಷ್ಯಾಧಾರಗಳನ್ನು ನೀಡಲು ಹಾಜರಾದ ಅವನ ಸಾಕ್ಷಿದಾರರಿಗೆ ಪಕ್ಷಗಾರನು ಪಾವತಿಸಬೇಕಾದ ಬ್ಯಾಟಾ;

(ಡಿ) ವ್ಯಾಜ್ಯ ಕಾರಣಕ್ಕಾಗಿ ವೆಚ್ಚವೆಂದು ಪರಿಗಣಿಸಲಾದ ವಿಚಾರಣಾವಧಿ ಪ್ರಕರಣಗಳಲ್ಲಿಯ ವೆಚ್ಚ;

(ಇ) ವಕೀಲನು ಸ್ವೀಕರಿಸಲಾದ ಶುಲ್ಕವನ್ನು ಮೆಮೋದಲ್ಲಿ ನಮೂದಿಸಿಲ್ಲದಿದ್ದರೆ ಅವನ ವಕೀಲನಿಗೆ ಅವನಿಂದ ವಾಸ್ತವವಾಗಿ ಪಾವತಿಸಲಾದ ಶುಲ್ಕ;

(ಎಫ್) ವಕಾಲತ್ತುಗಳ ಬೆರಳಚ್ಚಿಗಾಗಿ ಮತ್ತು ಮುದ್ರಣಕ್ಕಾಗಿ ಪಕ್ಷಗಾರನಿಂದ ಭರಿಸಲಾದ ವೆಚ್ಚ;

(ಜಿ) ದಾಖಲೆಗಳನ್ನು ಪರಿವೀಕ್ಷಣೆ ಮಾಡಿದುದಕ್ಕೆ ಪ್ರಾಧಿಕಾರದಿಂದ ಸಂದಾಯ ಮಾಡಲಾದ ವೆಚ್ಚ;

(ಹೆಚ್) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಹಾಜರಾಗಬೇಕೆಂಬ ಆಜ್ಞೆ ನೀಡದಿದ್ದಾಗ್ಯೂ ಸಾಕ್ಷಿದಾರರನ್ನು ಹಾಜರುಪಡಿಸುವುದಕ್ಕಾಗಿ ಪಕ್ಷಗಾರನು ಭರಿಸಿದ ವೆಚ್ಚ;

(ಐ) ನ್ಯಾಯ ನಿಂದನೆಯ ಯಾವುದೇ ಅರ್ಜಿಗಳನ್ನೊಳಗೊಂಡಂತೆ, ಅರ್ಜಿ ಹೂಡುವ ಮುನ್ನ, ಕಾನೂನಿನ ಅನ್ವಯ ನೀಡಬೇಕೆಂಬ ಅಗತ್ಯವಿಲ್ಲದಿದ್ದರೂ, ಅರ್ಜಿಗೆ ಸಂಬಂಧಿಸಿದಂತೆ ಯಾವುದೇ ಪಕ್ಷಗಾರನು ನೋಟಿಸನ್ನು ಜಾರಿಗೊಳಿಸಲು ಭರಿಸಿದ ವೆಚ್ಚ, ಯಾವುದಾದರೂ ಇದ್ದಲ್ಲಿ, ಅದನ್ನೂ ಒಳಗೊಂಡ ವೆಚ್ಚ;

–ಇವುಗಳನ್ನು ಒಳಗೊಂಡಿರತಕ್ಕದ್ದು.

(2) (i) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ವಕೀಲರ ಶುಲ್ಕವನ್ನು ನಿಗದಿಪಡಿಸಿರದಿದ್ದರೆ ಮತ್ತು ಸ್ವೀಕೃತಗೊಂಡ ಶುಲ್ಕದ ಮೊತ್ತದ ತ:ಖ್ತೆಯನ್ನು ದಾಖಲು ಮಾಡಿರದಿದ್ದರೆ ಅಂತಹ ಪ್ರತಿಯೊಂದು ಪ್ರಕರಣಕ್ಕೂ ಗರಿಷ್ಠ ಮೊತ್ತ ರೂ.250/– ಶುಲ್ಕವಾಗಿರತಕ್ಕದ್ದು.

(ii) ಅರ್ಜಿಗಳನ್ನು ಗುಂಪಾಗಿ ವಿಚಾರಣೆ ಮಾಡಲಾಗಿದ್ದು ಇತ್ಯರ್ಥವಾಗಿದ್ದ ಪಕ್ಷದಲ್ಲಿ ಒಬ್ಬರೇ ವಕೀಲರು ಹಾಜರಾಗಿದ್ದಲ್ಲಿ ಎಲ್ಲಾ ಪ್ರಕರಣಗಳಿಗೆ ಸೇರಿ ಗರಿಷ್ಠ ಸಂಚಿತ ಶುಲ್ಕವಾಗಿ ರೂ.1,000/– ಮಾತ್ರ ಅನುಮತಿಸತಕ್ಕದ್ದು.

(iii) ಯಾವುದೇ ಪ್ರಕರಣದಲ್ಲಿ ಹಿರಿಯ ವಕೀಲರೊಂದಿಗೆ ಕಿರಿಯ ವಕೀಲರು ಹಾಜರಾದರೆ, ಅಂತಹ ಪ್ರಕರಣದ ಸನ್ನಿವೇಶಗಳನ್ನಾಧರಿಸಿ ನಿಗದಿಪಡಿಸಿರುವ ಶುಲ್ಕದ ಮೊತ್ತದ 1/4ನೇ ಭಾಗವನ್ನು ಕಿರಿಯ ವಕೀಲರ ಶುಲ್ಕವೆಂದು ಸೇರಿಸತಕ್ಕದ್ದು.

(3) (i) ಅರ್ಜಿ ಅಥವಾ ಸಂದರ್ಭಾನುಸಾರವಾಗಿ ಅರ್ಜಿಗಳು ವಿಲೇಗೊಂಡ ದಿನಾಂಕದಿಂದ ಏಳು ದಿನಗಳೊಳಗಾಗಿ, ವಕೀಲರು ಶುಲ್ಕ ಪ್ರಮಾಣಪತ್ರವನ್ನು ಒಪ್ಪಿಸಿದಾಗ ಮಾತ್ರ ವಕೀಲರ ಶುಲ್ಕವನ್ನು ವೆಚ್ಚದಲ್ಲಿ ಸೇರಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ವೆಚ್ಚಗಳ ಆದೇಶಗಳನ್ನು ಹೊರಡಿಸಿದಾಗಲೆಲ್ಲ, ತೀರ್ಪನ್ನು / ಆದೇಶವನ್ನು ನೀಡಿದ ದಿನಾಂಕದಿಂದ 10 ದಿನಗಳೊಳಗಾಗಿ ವೆಚ್ಚದ ನಿವೇದನ ಪತ್ರವನ್ನು ತಯಾರಿಸತಕ್ಕದ್ದು ಮತ್ತು ಆಯೋಗದ ಕಾರ್ಯದರ್ಶಿಯು ಅಥವಾ ಅವರಿಂದ ಅಧಿಕಾರ ಹೊಂದಿರುವ ಇನ್ನಿತರ ಯಾವೊಬ್ಬ ಅಧಿಕಾರಿಯು ಸಹಿ ಮಾಡಿರತಕ್ಕದ್ದು.

(3) ಪ್ರತಿವಾದಿಗಳು ನೀಡಿದ ಯಾವುದಾದರೂ ದಾಖಲೆಗಳನ್ನು ರದ್ದುಪಡಿಸುವ ಸಂಬಂಧದಲ್ಲಿ ಯಾವುದೇ ನಿರ್ದಿಷ್ಟ ನಿರ್ದೇಶನ ನೀಡಿ ತೀರ್ಮ /ಆದೇಶಗಳನ್ನು ಹೊರಡಿಸಿದಲ್ಲಿ ತೀರ್ಮ / ಆದೇಶದ ಪ್ರತಿಯೊಂದಿಗೆ ಒಂದು ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅಂತಹ ಆದೇಶವನ್ನು ಕಾರ್ಯದರ್ಶಿ ಅಥವಾ ಅವರಿಂದ ಅಧಿಕಾರ ಹೊಂದಿದ ಇನ್ನಿತರ ಯಾವೊಬ್ಬ ಅಧಿಕಾರಿಯು ಸಹಿ ಮಾಡಿರತಕ್ಕದ್ದು.

**22. ಅಂತಿಮ ಆದೇಶ.–** (1) ಪ್ರತಿಯೊಂದು ಆದೇಶದಲ್ಲಿನ ಬಲ ಭಾಗದ ಮೇಲಿನ ಮೂಲೆಯಲ್ಲಿ ದೂರನ್ನು ಸಲ್ಲಿಸಿದ ಹಾಗೂ ಆದೇಶ ಹೊರಡಿಸಿದ ದಿನಾಂಕವನ್ನು ಸೂಚಿಸತಕ್ಕದ್ದು.

(2) ಆದೇಶದ ವ್ಯಾಜ್ಯಕಾರಣ ಶಿರೋನಾಮೆಯು ಎಲ್ಲಾ ಪಕ್ಷಕಾರರ ಹೆಸರು ಹಾಗೂ ವಿಳಾಸವನ್ನೊಳಗೊಂಡಿರತಕ್ಕದ್ದು.

(3) ಆದೇಶದ ಒಳಭಾಗದಲ್ಲಿ, ದೂರುದಾರನ ಅಥವಾ ಎದುರುದಾರನ ಹೆಸರನ್ನು ನಮೂದಿಸಿದ ನಂತರ, ಅವರ ಹೆಸರನ್ನು ಶಿರೋನಾಮೆಯಲ್ಲಿ ತೋರಿಸಿರುವ ರೀತ್ಯಾ ನಮೂದಿಸುವುದು ಹಾಗೂ ತದನಂತರ ಪಕ್ಷಗಾರರನ್ನು, ದೂರುದಾರ ಅಥವಾ ಎದುರುದಾರ ಪಕ್ಷಗಾರ ನಂ.1 ಅಥವಾ ಪಕ್ಷಗಾರ ನಂ.2 ಇತ್ಯಾದಿಯೆಂದು ನಮೂದಿಸತಕ್ಕದ್ದಲ್ಲ.

(4) ವಿಷಯ ಇತ್ಯರ್ಥಗೊಳಿಸಿದ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶವು ಎಷ್ಟು ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿ ಹಾಗೂ ನಿಖರವಾಗಿರತಕ್ಕದ್ದು.

(5) ಪಕ್ಷಗಾರರಿಗೆ ಆದೇಶದ ಒಂದು ಪ್ರತಿಯನ್ನು ಕಳುಹಿಸಿದಾಗ, ಅದನ್ನು ಯಾವ ವಿಧದಲ್ಲಿ ಹಾಗೂ ಯಾವ ದಿನಾಂಕದಂದು ಕಳಿಸಲಾಗಿದೆಯೆಂಬ ವಿವರಗಳನ್ನು ಆದೇಶದ ಕೊನೆಯ ಪುಟದಲ್ಲಿ ಮುದ್ರಿಸತಕ್ಕದ್ದು.

(6) ವಾದಗಳು ಸಮಾಪ್ತಿಗೊಂಡ ಮೇಲೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಿಮ ಆದೇಶವನ್ನು ಮೂವತ್ತು ದಿನಗಳೊಳಗೆ ಹೊರಡಿಸತಕ್ಕದ್ದು.

**23. ಉಚಿತ ಪ್ರತಿಗಳು.–** (1) ಪಕ್ಷಗಾರರಿಗೆ ನೀಡುವ ಪ್ರತಿಯೊಂದು ಉಚಿತ ಪ್ರತಿಯನ್ನು ಯಥಾಪ್ರತಿಗಳೆಂದು ದೃಢೀಕರಿಸತಕ್ಕದ್ದು ಮತ್ತು ಅವುಗಳ ಮೇಲೆ "ಉಚಿತ ಪ್ರತಿ" ಗಳೆಂದು ಮೇಲ್ ಬರಹವನ್ನು ನಮೂದಿಸಿ ದೃಢೀಕರಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಅನ್ಯಥಾ ಆದೇಶಿಸದ ಹೊರತು, ಮಧ್ಯಂತರ ಆದೇಶದ ಉಚಿತ ಪ್ರತಿಗಳನ್ನು ಯಾವುದೇ ಪಕ್ಷಗಾರರಿಗೆ ನೀಡತಕ್ಕದ್ದಲ್ಲ.

(3) ವಕೀಲರು ಅರ್ಜಿದಾರರನ್ನು / ಪ್ರತಿವಾದಿಗಳನ್ನು ಪ್ರತಿನಿಧಿಸುತ್ತಿದ್ದಲ್ಲಿ, ಅಂತಿಮ ಆದೇಶದ ಉಚಿತ ಪ್ರತಿಗಳನ್ನು ಸಂಬಂಧಪಟ್ಟ ವಕೀಲರಿಗೆ ವೈಯಕ್ತಿಕವಾಗಿ ನೀಡತಕ್ಕದ್ದು.

(4) ಯಾವ ಪ್ರಕರಣದಲ್ಲಿ ಒಬ್ಬರಿಗಿಂತಲೂ ಹೆಚ್ಚಿನ ಅರ್ಜಿದಾರರು ಒಂದು ಸೆಟ್ಟನ್ನು ನ್ಯಾಯಾಲಯದ ಶುಲ್ಕದ ಜೊತೆಗೆ ಜಂಟಿ ಅರ್ಜಿಯನ್ನು ಸಲ್ಲಿಸಿದ್ದು ಅವುಗಳಲ್ಲಿ ಪ್ರತಿಯೊಬ್ಬರೂ ಏಕರೂಪದ ಪರಿಹಾರವನ್ನು ಕ್ಲೇಮು ಮಾಡಿದಲ್ಲಿ, ಈ ಎಲ್ಲಾ ಅರ್ಜಿದಾರರಿಗೆ ವಕಾಲತ್ತು ಸಲ್ಲಿಸಿದ ವಕೀಲನಿಗೆ ಅಂತಿಮ ಆದೇಶದ ಒಂದು ಪ್ರತಿಯನ್ನು ನೀಡತಕ್ಕದ್ದು.

**24. ದಾಖಲೆಗಳ ರಕ್ಷಣೆ.–** (1) ದೂರಿನ ಪ್ರಕರಣಗಳಲ್ಲಿ, ಮೂಲ ಆದೇಶದ ಹಾಳೆಯನ್ನೊಳಗೊಂಡ ಮುಖ್ಯ ಕಡತದ ದಾಖಲೆಗಳನ್ನು 5 ವರ್ಷಗಳ ಕಾಲ ಸಂರಕ್ಷಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು, ಅಂತಿಮ ಆದೇಶದ ದೃಢೀಕೃತ ಪ್ರತಿಗಳನ್ನು ನೀಡುವ ಸಂದರ್ಭದಲ್ಲಿ, ಪ್ರಕರಣವನ್ನು ಅಂತಿಮವಾಗಿ ಇತ್ಯರ್ಥಗೊಳಿಸುವಾಗ ಹೆಚ್ಚಿನ ಪ್ರತಿಗಳನ್ನು ಪಡೆದುಕೊಳ್ಳಲು ವೈಯಕ್ತಿಕವಾಗಿ ಹಾಜರಾಗದೇ ಇರುವಂತಹ ಪಕ್ಷಗಾರರಿಗೆ ವಿಚಾರವನ್ನು ತಿಳಿಸತಕ್ಕದ್ದು.

(3) ದಾಖಲೆಗಳನ್ನು ಪಡೆಯಲು ಪಕ್ಷಗಾರರಿಗೆ ಕನಿಷ್ಠ ಒಂದು ತಿಂಗಳಿನ ಅವಧಿಯನ್ನು ನೀಡತಕ್ಕದ್ದು ಮತ್ತು ಒಂದು ವೇಳೆ ಪಡೆದುಕೊಳ್ಳಲು ಅವರು ತಪ್ಪಿದಲ್ಲಿ ಹೆಚ್ಚಿನ ಪ್ರತಿಗಳನ್ನು ಬೇಡವಾದುದು ಎಂದು ನಾಶಪಡಿಸತಕ್ಕದ್ದು.

**25. ದೃಢೀಕೃತ ಪ್ರತಿಗಳು.–** (1) ಆದೇಶದ ಪ್ರತಿಯೊಂದನ್ನು ಪಕ್ಷಗಾರರಿಗೆ ಉಚಿತವಾಗಿ ನೀಡತಕ್ಕದ್ದು.

(2) ದೃಢೀಕೃತ ಪ್ರತಿಗಾಗಿ ಸಲ್ಲಿಸಲಾಗುವ ಅರ್ಜಿಯು ಪ್ರಕರಣದ ಸಂಖ್ಯೆ, ವ್ಯವಹರಣೆಯ ಸ್ವರೂಪ, ತೀರ್ಪಿನ ಅಥವಾ ಆದೇಶದ ಅಥವಾ ದಾಖಲೆಯ ಅಥವಾ ಸಂದರ್ಭಾನುಸಾರವಾಗಿ ಹೇಳಿಕೆಯ ದಿನಾಂಕ ಮತ್ತು ಪೂರ್ಣ ವಿವರಣೆಯನ್ನು ಒಳಗೊಂಡಿರತಕ್ಕದ್ದು ಮತ್ತು ಎರಡು ರೂಪಾಯಿ ಕೋರ್ಟು ಶುಲ್ಕವನ್ನು ಲಗತ್ತಿಸಿರತಕ್ಕದ್ದು.

(3) ದೃಢೀಕೃತ ಪ್ರತಿಗಾಗಿ ಸಲ್ಲಿಸಲಾಗಿರುವ ಎಲ್ಲಾ ಅರ್ಜಿಗಳನ್ನು ಒಂದು ರಿಜಿಸ್ಟರ್‌ನಲ್ಲಿ ನಮೂದಿಸತಕ್ಕದ್ದು ಹಾಗೂ ಶುದ್ಧ ಪ್ರತಿಗಳನ್ನು ಪರಿಶೀಲಿಸುವ ಅಧಿಕಾರಿ – ಅಧೀಕ್ಷಕರು ಈ ರಿಜಿಸ್ಟರ್ ಅನ್ನು ನಿರ್ವಹಿಸತಕ್ಕದ್ದು.

(4) ರಿಜಿಸ್ಟರ್‌ನಲ್ಲಿ ನೀಡಿರುವ ಕ್ರಮ ಸಂಖ್ಯೆಯನ್ನು ಕೆಂಪು ಶಾಯಿಯಿಂದ ಅರ್ಜಿಯ ಪ್ರತಿಯಲ್ಲಿ ನಮೂದಿಸತಕ್ಕದ್ದು.

(5) ಪಕ್ಷಗಾರರ ಹೆಸರುಗಳು, ಅರ್ಜಿಯ ಸಂಖ್ಯೆ ಮತ್ತು ವಿಲೇಯಾದ ದಿನಾಂಕಗಳ ಕ್ರಮಬದ್ಧತೆಯನ್ನು ಪರಿಶೀಲಿಸಿದ ತರುವಾಯ, ದೃಢೀಕೃತ ಪ್ರತಿಗಳನ್ನು ಪಡೆಯಲು ಸಲ್ಲಿಸಿದ ಅರ್ಜಿಯನ್ನು ದೃಢೀಕೃತ ಪ್ರತಿ ಮಂಜೂರು ಮಾಡಲು ಪ್ರಾಧಿಕಾರ ನೀಡಲಾಗಿರುವ ಸಂಬಂಧಿಸಿದ ಅಧಿಕಾರಿಯ ಆದೇಶಕ್ಕಾಗಿ ಸಲ್ಲಿಸತಕ್ಕದ್ದು ಮತ್ತು ಇಂತಹ ಮಂಜೂರಾತಿ ಪಡೆದ ನಂತರವೇ ದೃಢೀಕೃತ ಪ್ರತಿಗಳನ್ನು ತಯಾರಿಸಿ ನೀಡತಕ್ಕದ್ದು.

(6) ಒಂದು ವೇಳೆ ಪಕ್ಷಗಾರನು ಒಂದು ಹೆಚ್ಚುವರಿ ಪ್ರತಿಯನ್ನು ಕೋರಿದರೆ, ದೃಢೀಕರಿಸಿದ ಹೆಚ್ಚುವರಿ ಪ್ರತಿಯನ್ನು ಹಾಳೆಗಳ ಸಂಖ್ಯೆ ಎಷ್ಟೇ ಇದ್ದರೂ, ಇಪ್ಪತ್ತು ರೂಪಾಯಿಗಳ ಪಾವತಿ ಪಡೆದು ಅವನಿಗೆ ನೀಡತಕ್ಕದ್ದು.

(7) ಒಂದು ಆದೇಶದ ದೃಢೀಕೃತ ಪ್ರತಿಯಲ್ಲಿ ಉಚಿತ ಪ್ರತಿಯನ್ನು ಯಾವ ದಿನಾಂಕದಂದು ನೀಡಲಾಯಿತು, ಅರ್ಜಿಯನ್ನು ಸಲ್ಲಿಸಿದ ದಿನಾಂಕ, ಯಾವ ದಿನಾಂಕದಂದು ಪ್ರತಿಯನ್ನು ಸಿದ್ಧಗೊಳಿಸಲಾಯಿತು ಮತ್ತು ಯಾವ ದಿನದಂದು ಅದನ್ನು ವ್ಯಕ್ತಿಗೆ ರವಾನಿಸಲಾಯಿತು ಎಂಬ ಈ ಎಲ್ಲ ವಿವರಗಳನ್ನು ನಿರ್ದಿಷ್ಟವಾಗಿ ತಿಳಿಸತಕ್ಕದ್ದು.

(8) ಮತ್ತೊಂದು ದೃಢೀಕೃತ ಪ್ರತಿಯನ್ನು ಪಡೆಯಬೇಕಾದರೆ ಇಪ್ಪತ್ತು ರೂಪಾಯಿಗಳ ಶುಲ್ಕವನ್ನು ಪಾವತಿಸತಕ್ಕದ್ದು.

(9) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಯಾವುದೇ ಫೈಲಿಗೆ ಸಂಬಂಧಿಸಿದ ಯಾವುದೇ ದಾಖಲೆಯ ದೃಢೀಕೃತ ಪ್ರತಿಯನ್ನು ಪಡೆಯಲು ಇಚ್ಛಿಸುವ ಅಂತಹ ಯಾವೊಬ್ಬ ಪಕ್ಷಕಾರನು, ದೃಢೀಕರಣಕ್ಕಾಗಿ ಇಪ್ಪತ್ತು ರೂಪಾಯಿಗಳನ್ನು ಪಾವತಿಸಿ ಪಡೆಯಬಹುದಾಗಿರುತ್ತದೆ:

ಪರಂತು, ಕೋರಿರತಕ್ಕ ದಾಖಲೆಯ ಅಂತಹ ದೃಢೀಕೃತ ಪ್ರತಿಯು 5 ಹಾಳೆಗೂ ಮೀರಿದರೆ ಅಂತಹ ಸಂದರ್ಭದಲ್ಲಿ ಇಪ್ಪತ್ತು ರೂಪಾಯಿಗಳಿಗೆ ಮೇಲ್ಪಟ್ಟು ಪ್ರತಿಯೊಂದು ಹಾಳೆಗೆ ಮೂರು ರೂಪಾಯಿಗಳಂತೆ ಹೆಚ್ಚುವರಿಯಾಗಿ ವಿಧಿಸತಕ್ಕದ್ದು.

(10) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಹೊರಡಿಸಲಾದ ಸಂಕೀರ್ಣ ಆದೇಶಗಳ ದೃಢೀಕೃತ ಪ್ರತಿಯನ್ನು ಪ್ರತಿ ದಾಖಲೆಗೆ ಐದು ರೂಪಾಯಿ ಪಾವತಿ ಪಡೆದು ಪೂರೈಸತಕ್ಕದ್ದು.

**26. ದಾಖಲೆಗಳ ಪರಿವೀಕ್ಷಣೆ.–** (1) ಹತ್ತು ರೂಪಾಯಿಗಳ ಶುಲ್ಕವನ್ನು ಅರ್ಜಿಯೊಂದಿಗೆ ಪಾವತಿಸಿ ಪಕ್ಷಗಾರರು ಅಥವಾ ಅವರ ಪ್ರತಿನಿಧಿಗಳು ದಾಖಲೆಗಳ ವಿಷಯವನ್ನು ಪರೀಕ್ಷಿಸಲು ಅವಕಾಶವಿರತಕ್ಕದ್ದು.

(2) ದಾಖಲೆಗಳ ಅಭಿರಕ್ಷಕರ ಸಮ್ಮುಖದಲ್ಲಿಯೇ ಪ್ರತಿಯೊಂದು ಶೋಧನೆ ಅಥವಾ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ದಾಖಲೆಗಳನ್ನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆವರಣದಿಂದ ಹೊರಗೆ ಸಾಗಿಸುವುದನ್ನು ಹಾಗೂ ತೆಗೆದುಬಿಡುವುದನ್ನು ಸಂಪೂರ್ಣವಾಗಿ ನಿಷೇಧಿಸತಕ್ಕದ್ದು.

(3) ಶೋಧನೆ ಅಥವಾ ಪರಿವೀಕ್ಷಣೆ ನಡೆಸಲು ಅನುಮತಿಯನ್ನು ನೀಡಿದಾಗ, ಶೋಧನೆ ಅಥವಾ ಪರಿವೀಕ್ಷಣೆಯನ್ನು ಮಾಡುವ ವ್ಯಕ್ತಿಯು ದಾಖಲೆಗಳ ಟಿಪ್ಪಣಿಯನ್ನು ಮಾಡಿಕೊಳ್ಳಲು ಹಕ್ಕುಳ್ಳವನಾಗಿರುತ್ತಾರೆಯೇ ವಿನ: ಯಾವುದೇ ಕಾರಣಕ್ಕಾಗಿಯಾಗಲಿ ದಾಖಲೆಯ ಯಾವುದೇ ಭಾಗದ ಪ್ರತಿಯನ್ನು ಮಾಡಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**27. ಪರೇಶಾ–ಯಾದ್–ದಸ್ತ್.–** ಯಾವುದೇ ಪಕ್ಷಗಾರನು ಸ್ವತ: ಹಾಜರಾಗಿದ್ದು ಮತ್ತು ಅವನು ಅನಕ್ಷರಸ್ಥರಾಗಿದ್ದಲ್ಲಿ, ಅಂತಹ ಪಕ್ಷಗಾರನಿಗೆ ಬೆಂಚ್ ಕ್ಲರ್ಕ್‌ನು ಮುಂದಿನ ವಿಚಾರಣೆ ದಿನಾಂಕವನ್ನು ಬರಹದ ಮುಖಾಂತರ ನೀಡತಕ್ಕದ್ದು.

**28. ಅಧಿಕಾರಗಳು ಹಾಗೂ ಪ್ರಕ್ರಿಯೆಗಳು.–** (1) ರಾಜ್ಯ ಚುನಾವಣಾ ಆಯೋಗದ ಆಯುಕ್ತರು ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರಲ್ಲಿ (1908ರ 5) ವಿಧಿಸಲಾದ ಪ್ರಕ್ರಿಯೆಗಳಿಗೆ ಬದ್ದರಾಗಿರತಕ್ಕದ್ದಲ್ಲ. ಆದರೆ ಸ್ವಾಭಾವಿಕ ನ್ಯಾಯಗಳ ತತ್ವಗಳಿಂದ ಮಾರ್ಗದರ್ಶನ ಹೊಂದುವವರಾಗಿರತಕ್ಕದ್ದು ಮತ್ತು ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರ(1908ರ 5ನೇ) ಉಪಬಂಧಗಳನ್ನು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ಮಾತ್ರ ರಾಜ್ಯ ಚುನಾವಣಾ ಆಯೋಗದ ಪ್ರಕ್ರಿಯೆಗಳಿಗೆ ಅನ್ವಯಿಸತಕ್ಕದ್ದು.

(2) ಈ ಅಧಿನಿಯಮ ಹಾಗೂ ನಿಯಮಗಳ ಅಡಿಯಲ್ಲಿ ಕಾರ್ಯನಿರ್ವಹಿಸುವ ಉದ್ದೇಶದಿಂದ ರಾಜ್ಯ ಚುನಾವಣಾ ಆಯೋಗದ ಆಯುಕ್ತರು, ದಾವೆಗಳ ವಿಚಾರಣೆಯನ್ನು ಕೈಗೊಂಡಾಗ ಈ ಕೆಳಗೆ ಕಾಣಿಸಿರುವ ವಿಷಯಗಳಲ್ಲಿ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರಲ್ಲಿ ಸಿವಿಲ್ ನ್ಯಾಯಾಲಯಗಳಿಗೆ ಪ್ರದತ್ತವಾದ ಅಧಿಕಾರವನ್ನೇ ಹೊಂದಿರತಕ್ಕದ್ದು, ಎಂದರೆ:–

(ಎ) ನ್ಯಾಯಾಲಯದ ಆಜ್ಞೆ ತಲುಪಿಸುವಲ್ಲಿ ಹಾಗೂ ಯಾವೊಬ್ಬ ವ್ಯಕ್ತಿಯನ್ನು ಸಮನು ಮಾಡುವುದು ಮತ್ತು ಹಾಜರಾತಿಯನ್ನು ಒತ್ತಾಯಿಸುವುದು ಹಾಗೂ ಅವನನ್ನು ವಿಚಾರಣೆಗೊಳಪಡಿಸುವುದು;

(ಬಿ) ದಾಖಲೆಗಳನ್ನು ಶೋಧಿಸುವುದು ಹಾಗೂ ಹಾಜರುಪಡಿಸಲು ಅಗತ್ಯಪಡಿಸುವುದು;

(ಸಿ) ಅಫಿದಾವಿತ್ತಿನ ಮೂಲಕ ಸಾಕ್ಷ್ಯಾಧಾರಗಳನ್ನು ಸ್ವೀಕರಿಸುವುದು;

(ಡಿ) ಸಾಕ್ಷಿಗಳನ್ನು ಅಥವಾ ದಾಖಲೆಗಳನ್ನು ಪರೀಕ್ಷಿಸುವುದಕ್ಕೆ ಅಧಿಕಾರವನ್ನು ಹೊರಡಿಸುವುದು;

(ಇ) ತೀರ್ಮಾನಗಳನ್ನು ಪುನರ್ ವಿಮರ್ಶೆ ಮಾಡುವುದು;

(ಎಫ್) ದೋಷಗಳ ಕಾರಣದಿಂದಾಗಿ ಒಂದು ಅರ್ಜಿಯನ್ನು ವಜಾ ಮಾಡುವುದು ಅಥವಾ ಏಕ ಪಕ್ಷೀಯವಾಗಿ ತೀರ್ಮಾನಿಸುವುದು;

(ಜಿ) ದೋಷಗಳ ಕಾರಣಕ್ಕಾಗಿ ಯಾವುವೇ ಅರ್ಜಿಗಳನ್ನು ವಜಾ ಮಾಡಲ್ಪಟ್ಟ ಆದೇಶವನ್ನು ಹಾಗೂ ಏಕ ಪಕ್ಷೀಯವಾಗಿ ಮಾಡಿದ ಆದೇಶವನ್ನು ತಳ್ಳಿಹಾಕುವುದು;

(ಹೆಚ್) ಯಾವುದೇ ಇತರ ವಿಷಯಗಳು

(3) ದಾಖಲೆಗಳ ತಪಾಸಣೆಗಾಗಿ ಹಾಗೂ ದೃಢೀಕೃತ ಪ್ರತಿಗಳನ್ನು ಒದಗಿಸಲು ಸಂಗ್ರಹಿಸಿದ ಶುಲ್ಕವನ್ನು ಕರ್ನಾಟಕ ಆರ್ಥಿಕ ಸಂಹಿತೆಯ ಅನುಬಂಧ 250ನೇ ಹಾಗೂ 251ನೇ ಅನುಚ್ಛೇದಲ್ಲಿ ಸೂಚಿಸಿರುವಂತೆ ದೂರನ್ನು ದಾಖಲಿಸಲು ಇರುವ ಠೇವಣಿ ಶುಲ್ಕವನ್ನು ನಿರ್ವಹಿಸುವ ಉದ್ದೇಶದಿಂದ ಇಟ್ಟಿರುವ ಲೆಕ್ಕ ಶೀರ್ಷಿಕೆಯಲ್ಲಿ ಜಮಾ ಮಾಡತಕ್ಕದ್ದು.

**29. ವಿಚಾರಣೆಗಳು ಹಾಗೂ ವ್ಯವಹರಣೆಗಳು.–** ರಾಜ್ಯ ಚುನಾವಣಾ ಆಯೋಗದ ಮುಂದಿರುವ ಎಲ್ಲಾ ವ್ಯವಹರಣೆಗಳು ಭಾರತ ದಂಡ ಸಂಹಿತೆಯ 193, 219 ಹಾಗೂ 228ನೇ ಪ್ರಕರಣಗಳಲ್ಲಿ ಅರ್ಥೈಸಿರುವಂತೆ ನ್ಯಾಯಾಂಗದ ವ್ಯವಹರಣೆಗಳೆಂದು ಭಾವಿಸತಕ್ಕದ್ದು ಹಾಗೂ ಈ ವ್ಯವಹರಣೆಗಳನ್ನು ನಡೆಸುವ ಪ್ರಾಧಿಕಾರವು ಇಂತಹ ಎಲ್ಲಾ ವ್ಯವಹರಣೆಗಳ ಉದ್ದೇಶಕ್ಕಾಗಿ ಸಿವಿಲ್ ನ್ಯಾಯಾಲಯವೆಂದು ಭಾವಿಸತಕ್ಕದ್ದು.

**30. ರಾಜ್ಯ ಚುನಾವಣಾ ಆಯೋಗದ ಆಯುಕ್ತರಲ್ಲಿ ಅಂತರ್ಗತವಾಗಿರುವ ಅಧಿಕಾರಗಳ ಉಳಿಸುವಿಕೆ.–** ಇದರಲ್ಲಿನ ಯಾವುದೇ ನಿಯಮಗಳು ರಾಜ್ಯ ಚುನಾವಣಾ ಆಯುಕ್ತರು ನ್ಯಾಯದ ಮೂಲೋದ್ದೇಶಕ್ಕಾಗಿ ಆದೇಶ ಹೊರಡಿಸಲು ನೀಡಿರುವ ಅಂತರ್ಗತ ಅಧಿಕಾರವನ್ನು ಬಾಧಿಸಬೇಕೆಂಬ ಅಥವಾ ಮಿತಿಗೊಳಿಸುವ ಅಥವಾ ನ್ಯಾಯಾಲಯದ ನಡಾವಳಿಗಳ ತೆಗಳಿಕೆಯನ್ನು ತಡೆಯಬೇಕೆಂಬ ಗುರಿಯನ್ನು ಹೊಂದಿರುವುದಾಗಿ ಭಾವಿಸತಕ್ಕದ್ದಲ್ಲ.

**31. ಅರ್ಜಿ / ದಾವೆ ಹೂಡಲು ಶುಲ್ಕ.–** ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲು ಮಾಡುವ ಪ್ರತಿಯೊಂದು ದೂರು / ಅರ್ಜಿಯು ಆಯೋಗದ ಬೆಂಗಳೂರಿನಲ್ಲಿ ಪಾವತಿಯಾಗತಕ್ಕದ್ದೆಂದು ಹೆಸರಿಸಿದ್ದು ರಾಷ್ಟ್ರೀಕೃತ ಬ್ಯಾಂಕಿನ ರೂ.2500/– (ಎರಡು ಸಾವಿರದ ಐನೂರು ರೂಪಾಯಿಗಳು ಮಾತ್ರ) ಮೊತ್ತದ ಡಿಮ್ಯಾಂಡ್ ಡ್ರಾಫ್ಟ್ ಅಥವಾ ಬ್ಯಾಂಕರ್ಸ್ ಚೆಕ್ ಅನ್ನು ಹೊಂದಿರತಕ್ಕದ್ದು. ಈ ನಿಯಮಗಳು ಜಾರಿಗೆ ಬಂದ ಬಳಿಕ ಮೇಲೆ ತಿಳಿಸಿದ ಶುಲ್ಕವನ್ನು ಪಾವತಿಸದೇ ಇರುವ ಯಾವುದೇ ದೂರು ಅರ್ಜಿಯನ್ನು ರಾಜ್ಯ ಚುನಾವಣಾ ಆಯೋಗದ ಎದುರು ಹೂಡಲ್ಪಟ್ಟಿದಲ್ಲಿ, ಅದನ್ನು ಪುರಸ್ಕರಿಸತಕ್ಕದ್ದಲ್ಲ ಮತ್ತು ಸ್ವೀಕರಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ (ಜಿ. ಪಂ.)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## RURAL DEVELOPMENT AND PANCHAYATH RAJ SECRETARIAT

## NOTIFICATION

### No: RDP/ 364/ZPS /2011, Bangalore, dated: 22-03-2013

The draft of the Karnataka State Election Commission (Conduct of Court Proceedings)Rules, 2013 which the Government of Karnataka, proposes to make in exercise of the powers conferred by Section 311 of the Karnataka Panchayat Raj Act, 1993 (Karnataka Act 14 of 1993) is hereby published, as required by sub-section (1) of said Section of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection and suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Secretary to Government, Rural Development and Panchyayat Raj Department, M.S Building, 3rd floor, Dr. B.R.Ambedkar Veedhi, Bangalore- 560 001.

### DRAFT RULES

**1. Short title and commencement**.- (1) These rules may be called Karnataka State Election Commission (Conduct of Court Proceedings) Rules, 2013.

(2) They shall come into force from the date of their publication in the Official Gazette.

**2. Definitions**.-In these rules, unless the context otherwise requires,-

(a) 'Act' means Karnataka Panchayat Raj Act, 1993 (Karnataka Act 14 of 1993);

(b) 'State Election Commission' means State Election Commission constituted under Section 308 of Karnataka Panchayat Raj Act, 1993(Karnataka Act 14 of 1993);

(c) "Section" means a section of the Act.

(d) "Court Officer" means the officer designated by the State Election Commission;

(e) Words and expressions used in these rules and not defined herein but defined in the Act shall have the same meaning respectively assigned to them in the Act:

**3. Dress Code.-** The advocates shall be allowed to appear in their usual dress as prescribed by the High Court but without the gown.

**4. Hearing Hours.-** Subject to the provisions of these rules, the normal working hours of the Karnataka State Election Commission Court for hearing matters shall be from 11.00 AM to 1.00 PM and 2.00 PM to 5.00 PM on all Court working days.

**5. Cause List: -** (1) Cause list of the Karnataka State Election Commission Court for the cases shall be made ready before the close of the working hours of the court and displayed on the notice board.

(2) Every cause list shall contain the following particulars, namely:-

| (1) | (2) | (3) | (4) |
|---|---|---|---|
| Sl.No | No of the matter | Names of the parties | Name of the party or counsel or agent appearing |

(3) If a date of hearing is given in the presence of the parties or their agents, it shall not be a ground for non-appearance for the reason that the cause list for the concerned date does not show the matter or contains incorrect entry or there is omission of the particulars of the matter.

**6. Institution of Complaints.-** (1) Where a complaint is filed in Karnataka State Election Commission, it shall be filed in 3 sets with additional set equal to the number of opposite party (ies) / respondent(s)

(2) Every complaint shall clearly contain particulars of complaint and the necessary documents. It shall also be accompanied by copies of such documents as are necessary to prove the complaint.

**7. Nomenclature to be given to the complaints**.- A complaint shall be referred to as NyaPra.GP/CTP/ CZP/ ADA and MISC eg. SEC.02.ADA.2011

**8. Procedure regarding presentation of complaint.-** (1)Every pleading, affidavit, memoranda and list of documents and documents presented to, or filed in the Karnataka State Election Commission shall be fairly and legibly typewritten in English or Kannada on durable paper of Metric A4 Size (30. 5 Cms long & 21.5 Cms wide), weighing not less than 4.9 K.gms., a Ream; in the case of documents other than pleadings on paper of not less than 3.0 K.gms., a Ream, and with outer margin 6.5 Cms. wide and inner margin 2.5 Cms. wide, in the form of a paper book.

(2) All pleadings shall be signed and dated by the party and the date of presentation of the pleadings to the Karnataka State Election Commission, shall be written distinctly.

(3) All dates, sums and figures, shall be written in words as well as in figures, and the words, shall be written in brackets as shown below :

(a) 7th September 2011 (Seventh day of September two thousand eleven);

(b) Rs.10, 000/-(Rupees ten thousand only)

(4) All copies of documents filed before the Karnataka State Election Commission shall be type-written and attested.

Note: Instead of typewritten copies of documents xerox copies of the documents may be permitted to be filed provided they are clear and legible.

(5) The person attesting the documents as "True Copy" shall attest the documents with his full signature and in the form given below:

"This is the True Copy of the Document referred to as Annexure "..........". in the application of "...........". (Name of the Advocate to be typed) Advocate for Applicant (s)/ Respondent (s).

**9. Scrutiny of complaint.-** (1) Every complaint shall after it is filed in the State Election Commission, it shall be numbered.

(2) If there is any defect in the filing of the complaint, the particulars of such defects shall be recorded and the party or his agents shall be informed of the defects asking them for rectifying the defects within 15 days.

(3) After the expiry of the time given, the matter shall, irrespective of the fact as to whether the defects have been rectified or not, be placed before Karnataka State Election Commissioner for appropriate orders.

**10. Practitioners before the Karnataka State Election Commission.-** (1) Subject to the provisions hereinafter provided, no Advocate or Practitioner shall be entitled to appear and act in any matter before the Karnataka State Election Commission unless he files into the Karnataka State Election Commission a Vakalath duly signed and executed by the party for whom he appears.

(2) Where an Advocate, who has filed a Vakalatnama, engages another to appear and argue his client's case, but not to act for the client, the Karnataka State Election Commission may permit such other Advocate to appear and argue either with filing a Vakalatnama or on filing a memorandum of appearance.

(3) An Advocate proposing to file a Vakalatnama in a proceeding in which there is already an Advocate on record, shall not do so, unless he produces a written consent or no objection of the Advocate on record or when such consent is refused or not obtainable on account of the Counsel not being able to contact despite due deligence or on account of any other bonafide cause, unless he obtains special permission of the Karnataka State Election Commission.

(4) Before filing the Vakalatnama in the Karnataka State Election Commission the Advocate shall endorse his acceptance thereon over his signature and enter the date of such acceptance. He shall also enter therein his address for service along with his telephone number.

(5) Subject to the permission of the Karnataka State Election Commission, the Party who has engaged an Advocate to appear for him shall not be entitled to be heard in person unless he withdraws the Vakalatnama executed by him.

**11. Procedure regarding presentation of Interlocutory Applications.-**(1) In addition to the number of copies of the application, to be given, one extra copy of the application with Annexures shall be filed into the Karnataka State Election Commission.

(2) Where an application filed purports to be by an association, the Person or Persons who sign/s the application shall produce along with the application a copy of the Bye-laws or Rules of the said Association and also a true copy of the resolution of the Association empowering them to sign and verify the pleadings.

**12. Particulars of Interlocutory Applications.-**(i) The Interlocatary Applications shall contain the following particulars, namely:-

(a) All Interlocutory Applications shall contain the name/s of the applicant/s respondent/s and shall specifically state his/their rank and status in the main application;

(b) Only one relief shall be claimed in one Interlocutory Application;

(c) All Interlocutory Applications which are found to be in order, after scrutiny, shall be serially numbered as 'I.A.I', 'I.A.II' etc., entered in the order sheet before the I.As are listed for orders, by the Pending Branch;

(d) The arrangement of the Interlocutory Applications shall be in chronological order and respondents objection/s to the Interlocutory Application/s if any filed, shall be placed below the respective Interlocutory Application/s;

(e) If an order is passed on an I.A., the Court Officer shall make a note on that I.A., regarding its disposal as "Disposed of vide order dated ..........";

(f) No Interlocutory Application/s shall be filed in the Court Hall, save under exceptional circumstances, without the leave of the Bench; and

(g) If any Interlocutory Application is permitted to be filed in Court, the Court Officer shall follow the same procedure as is provided in Clauses (1) to (iv) above, in relation to such Interlocatory Applications.

(ii)- Procedure to hear Interlocatory Applications.

(a) Where Interlocutory Applications are filed subsequent to the filing of any original application, and where any party likely to be affected by it, has already entered appearance, the Interlocutory Application/s shall not be posted for hearing, unless such Counsel or party has been served with notice of the same by delivering to him a copy of the I.A/s and all Annexures to it, if any, and written acknowledgement of such party or Counsel or Registered Clerk is obtained and proof of the same is produced along with the said Interlocutory Application; and

(b) If the applicant or his counsel makes an endorsement on the application that the Counsel or respondent refused to receive the copy of the application or could not be served with even after due deligence, the Karnataka State Election Commission may direct the receipt and numbering of such Interlocutory Application.

(c)Such endorsement shall contain the date, time and place at which such tender was made and refused.

(iii) Copies of the interim orders passed by the Karnataka State Election Commission before service of notice on the respondent shall not be issued to the applicant or the concerned authority, unless the applicant has filed into the Karnataka State Election Commission for service of notice of the application on parties to whom notice has to be given or is directed to be given by the Karnataka State Election Commission , with the appropriate amount of process affixed thereto in Court Fee labels, together with as many plain paper copies of the application and supporting affidavit or memorandum of facts and annexures, if any, as there are parties to be served with notice and has complied with the office Objection/s.

(iv) The Fee for issue of orders on Interlocutory Application shall be the same as prescribed for certified copies.

**13. Contents of Affidavits.-**(1) (i) Every affidavit filed in the Karnataka State Election Commission shall set forth the cause title of the proceedings or matter in which it is sought to be used and also in the affidavit of an Interlocutory Application;

(ii) Every person making an affidavit shall describe his Particulars in such manner which shall be sufficient to identify him clearly;

(iii) An affidavit shall contain statement of facts only and avoid arguments;

(iv) When an affidavit contains statement of facts not within the deponent's personal knowledge, but based on the information received by him, he shall state so, and shall also state that he believes the same to be true and shall give the source of such information wherever possible and the grounds of his belief, if any;

(v) Annexures, if any, filed with the Interlocutory Application shall be certified;

(vi) Affidavit intended to be filed in the Karnataka State Election Commission may be sworn before and attested by Attesting Officers

**Note**:- Attestery officers are any person authorised by any law to administer oath, for purposes of this Rule.

**14. Procedere to file Affidavit.-** (i) A deponent of an affidavit shall sign or make his mark at the foot of every page of the affidavit and also at the end of it;

(ii) The Attesting Officer shall authenticate every correction, alteration or interlineation by placing his initials near it and also note at the foot of every page the number of such authenticated corrections, etc. , or enter the word

'Nil', if there is none and initial such entry and sign his name and enter his designation at the end of the affidavit, and affix thereto his official seal or the seal of his office together with the date;

(iii) The fact of the oath having been administered or solemn affirmation having been made in his presence shall be noted by the Attesting Officer, before he affixes his signature.

(iv) If the deponent is not personally known to the Attesting Officer, he shall be identified by a person known to the Attesting Officer and the fact of such identification together with the name and description of the person making the identification shall be noted at the end of the affidavit and the signature of such person shall be affixed & if the deponent, not known to the Attesting Officer, cannot be so identified, the left thumb impression of such deponent shall also be affixed at the end of the affidavit and be certified to be such left thumb impression of the person appearing before him, by the Attesting Officer.

(v) If the deponent appears to be illiterate or blind or is unacquainted with the language in which the affidavit is made or written, the affidavit shall be read out and explained to the deponent in a language known to him in the presence of the Attesting Officer, who shall certify that it was so explained in his presence and that the deponent appeared to have understood the same and signed his name or made his mark in the presence of the Attesting Officer.

(vi) If any document is referred to in the affidavit and produced along with it, the Attesting Officer shall affix his signature with an endorsement thereon as follows:

"This is the document referred to as Exhibit .................in the affidavit of ............ Sworn to/solemnly affirmed before me this ........day of .......2011.

**15. Issue of Notice.-** (1)Whenever the Karnataka State Election Commission directs the issuance of a notice in respect of a complaint, to the party (ies)/ respondent(s), ordinarily such notice shall be issued for a period of 15 days and depending upon the circumstances of each case even for less than 15 days.

(2) When there is a question of raising presumption of service 15 days notice shall be required.

(3) Along with the notice, copies of the complaint, memorandum of grounds of petitions and other documents filed shall be served upon the opposite party (ies)/ respondent(s) .

(4) After the opposite party(ies)/ respondent(s) has put in appearance, no application or documents shall be received by the Karnataka State Election Commission unless it bears an endorsement that a copy thereof has been served upon the other side.

**16. Appearance of parties and consequences of non- appearance.-** (1) If, on the date fixed for hearing or any subsequent date to which the hearing may be adjourned, the petitioner does not appear either in person or by a pleader when the case is called for hearing, the State Election Commissioner may dismiss the petition, deemed appeal or as the case may be, for default.

(2) If, on the date fixed for hearing or any subsequent date to which the hearing may be adjourned, the respondent/s does/do not appear in person or by his pleader when the case is called for hearing, the State Election Commissioner may decide the case on merits after hearing the petitioner or his pleader.

(3) When the case is dismissed for default, the petitioner may make a miscellaneous application to the State Election Commission along with an affidavit within 30 days from the date of the order and where it is proved that he was prevented by sufficient cause from appearing when the case was called out for hearing, the State Election Commissioner may restore the case on such terms as to costs or otherwise as he deems fit:

Provided that in case in which the respondent had already put in appearance, an opportunity of being heard shall be afforded to the respondent before restoration:

Provided that the State Election Commissioner may, if he or she is satisfied that the applicant had sufficient cause for not making the application in time, entertain such application if it is made within a period of 30 days from the date of expiry of the aforesaid period of 60 days.

(4) Where a case is heard, ex-parte and order is pronounced against the respondent/s under Sub Rule (2), the respondent may make a miscellaneous application to the State Election Commission along with an affidavit within 30 days from the date of the order and if the respondent satisfies the State Election Commissioner that the notice was not duly served or that he was prevented by sufficient cause from appearing when the case was called for hearing, the State Election Commissioner may after giving the petitioner an opportunity of being heard, rehear the case on such terms as to costs or otherwise as he deems fit:

Provided that the State Election Commissioner may, if he or she is satisfied that the applicant had sufficient cause for not making the application in time, entertain such application if it is made within a period of 30 days from the date of expiry of the aforesaid period of 60 days.

(5) The provisions of the Limitation Act, 1963 are not applicable to the proceedings before State Election Commission.

**17. Adjournment.-** (1) Every proceeding before Karnataka State Election Commission shall be conducted as expeditiously as possible and as per the requirements of the act.

(2) The Karnataka State Election Commission shall record the reasons for any adjournment made by it.

(3) The complainant or petitioner, as the case may be may also be burdened with cost unless sufficient cause is shown for seeking adjournment:

Provided that in the circumstances of a particular case, the amount of cost imposed may be the actual cost &TA,DA as per the provision but in no case less than `.100.

(4) The cost imposed may be given to the other party or parties to defray his or their expenses or shall be deposited in the State government receipt head.

(5) If any adjournment is granted without awarding cost, the order sheet shall mention the reasons thereof.

(6) All orders adjourning the matter shall be signed by the Commissioner, Karnataka State Election Commission.

(7) Non availability of a lawyer who is representing the party(ies) shall not be ground for seeking adjournment of the matter unless absence is beyond the control of the lawyer, such as his sudden illness or bereavement in the family.

**18. Arguments.-** (1)Arguments shall be as brief as possible to the point of issue.

(2) Where a party is represented by a counsel, it shall be mandatory to file a brief of written arguments two days before the matter is fixed for arguments.

(3) In case of default to file briefs, the cost shall be imposed at the same rates as laid down for grant of adjournments.

**19. Ex-parte interim order.-** Any ex-parte interim order issued by Karnataka State Election Commission shall stand vacated after 45 days if in the meanwhile the objections to the interim order are not heard and disposed of.

**20. Maintenance of Court Diary and Register.-** (1) (i) The Court Officer shall prepare a Court Diary legibly in a Register recording briefly whether the case was adjourned or part-heard or heard and disposed of or heard and reserved for orders, as the case may be, and it shall be signed by him.

(ii)The Court Diary shall be kept open for inspection by the public, during working hours.

(2) After judgment/orders are pronounced by the Karnataka State Election Commission, the Court Officer concerned shall make an entry regarding disposal of the application in a Register.

**21. Costs.-** (1) Unless otherwise ordered by the Karnataka State Election Commission costs shall include.-

(a) Court fee paid on:

(i) Pleadings;

(ii) Documents to be produced with pleadings and produced by the party;

(iii) Vakalath filed for the party (when more Vakalaths than one are filed for a party, Court Fee on only one Vakalath shall be included) ;

(iv) Process issued at the instance of the party;

(v) Certified copies filed by the party and which are required for adjudication of the dispute;

(b) Cost of obtaining certified copies;

(c) Batta paid by a party to his witness who appeared in the Karnataka State Election Commission to give evidence;

(d) Cost in interlocutory matter which is made costs in the cause;

(e) Fee actually paid by him to his Counsel when fee received by the Counsel is not specified in the memo;

(f) The expenditure incurred on the typing, and printing of the pleadings by the party;

(g) Charges paid by the authority for inspection of records;

(h) Expenditure incurred by a party for producing witness even though not summoned through the Karnataka State Election Commission;

(i) Expenditure incurred on any notices which though not required to be given by law has been given by any party to the application, before the institution of the application including an application for contempt, if any, shall be added towards costs.

(2) (i) Where no advocate's fee is fixed by the Karnataka State Election Commission and where no statement of the amount of fee received is filed, the maximum fee shall be Rs.250/- per case.

(ii) Where batches of applications are heard and disposed of, in which a common Counsel appears a maximum consolidated fee of Rs1,000/- shall be allowed for all the cases.

(iii) Where Junior Counsel appears along with the Senior Advocate, Junior's fee of 1/4th of the fee allowed in the circumstances of the case, shall be added as Junior's fee.

(3) (i) The Advocate's fee shall be added to the costs only on production of fee certificate by the Counsel within 7 days from the date of disposal of the application or applications as the case may be.

(ii) Whenever costs are ordered by the Karnataka State Election Commission a Memorandum of costs shall be prepared within 10 days from the date of the Judgment/Order and shall be signed by the Secretary or any other Officer authorised by him.

(iii) Whenever Judgements/Orders are passed issuing any specific direction quashing any document issued by the respondent/s an order shall be issued along with the copy of the Judgement/Order, and such order shall be signed by the Secretary or any other Officer authorized by him.

**22. Final order.-**(1) In an order, the top right hand corner shall show as to when the complaint is filed and the date of the order.

(2) The cause title of the order shall contain the names of all the parties with their addresses.

(3) In the body of the order, it is desirable that after mentioning the complainant or the opposite party, their names as shown in the title be mentioned and parties thereafter may not be mentioned as complainant or opposite party no.1 or opposite party no.2 etc.,

(4) The order of Karnataka State Election Commission disposing of a matter shall be as short and precise as practicable.

(5) When a copy of the order is sent to a party, the mode by which it is sent and the date on which it is sent shall be stamped on the last page of the order.

(6) The Karnataka State Election Commission shall pass final order within Thirty (30) days on the conclusion of the arguments.

**23. Free copies.-** (1)Every free copy issued to a party shall be certified to be a true copy and shall be superscribed "Free Copy," and shall be certified.

(2) No free copy of the interim orders shall be given to any of the parties, unless otherwise ordered by the Karnataka State Election Commission.

(3) Whenever Advocates represent the applicant/respondent, free copies of the final orders shall be given in person to the Advocate concerned.

(4) Where more than one person files a joint application with one set of Court Fee, each of them claiming similar relief, one copy of the final order shall be given to the Counsel who has filed vakalath for all those applicants

**24. Preservation of records.-**(1)In the case of complaint, the record containing main files with original order sheet shall be preserved for a period of 5 years.

(2) The Karnataka State Election Commission shall inform the parties while forwarding the certified copies of the final order, where they do not appear in person at the time of finally disposing of the matter to arrange to collect the extra sets.

(3) A period of at least 1 month shall be given for the purpose of collection of record by the party and in case of default the extra sets shall be weeded out.

**25. Certified copy.-** (1) A copy of the order is to be given to the parties free of cost.

